

ಎನಗೂ ಆಣೆ ರಂಗ ನಿನಗೂ ಆಣೆ ॥ ಪ ॥

ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ॥ ಅ ಪ ॥

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ, ರಂಗ
ಎನ್ನ ನೀ ಕೈ ಬಿಟ್ಟು ಪೋದರೆ ನಿನಗೆ ಆಣೆ ॥ ೧ ॥

ತನುಮನದನದಲಿ ವಂಚಕನಾದರೆ ಎನಗೆ ಆಣೆ, ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ ॥ ೨ ॥

ಕಾಕು ಮನುಜರ ಸಂಗವ ಮಾಡಿದರೆನಗೆ ಆಣೆ, ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ ॥ ೩ ॥

ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ, ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ॥ ೪ ॥

ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ, ರಂಗ
ಪುರಂದರವಿಠಲ ನೀನೊಲಿಯದಿದ್ದರೆ ನಿನಗೆ ಆಣೆ ॥ ೫ ॥

---ಶ್ರೀ ಪುರಂದರದಾಸರು

JAGADISH

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ
# ತಿರುಮಲೆ



## ವಾರ್ಷಿಕ ಪವಿತ್ರೋತ್ಸವ

7- 8--92 ರಿಂದ 10--8--92 ವರೆಗೆ

| | |
|---|---|
| 7- 8- 92ಶುಕ್ರವಾರ | ಅಂಕುರಾರ್ಪಣೆ |
| 8- 8 92ಶನಿವಾರ | ಪವಿತ್ರ ಪ್ರತಿಷ್ಠೆ |
| 9 -8 -92ಬಾನುವಾರ | ಪವಿತ್ರ ಸಮರ್ಪಣೆ |
| 10- 8--92ಸೋಮವಾರ | ಪೂರ್ಣಾಹುತಿ |

ತಾವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ



ಗೌರವ ಸಂಪಾದಕರು
ಶ್ರೀ ಎಂ ವಿ ಎಸ್ ಪ್ರಸಾದ್, ಐ.ಎ.ಎಸ್
ಕಾರ್ಯನಿರ್ವಹಣಾಧಿಕಾರಿ
ತಿ.ತಿ.ದೇ ತಿರುಪತಿ.

ಸಂಪಾದಕ
ಕೆ ಸುಬ್ಬಾರಾವ್ಪ ಎಂ ಎ.

ಉಪಸಂಪಾದಕ
ಬಿ ಎನ್ ಶ್ರೀನಿವಾಸನ್ ಎಂ.ಎ.,

ಮುದ್ರಣ
ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ.ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧- ೦೦**
**ವಾರ್ಷಿಕ ಚಂದಾ ೧೨- ೦೦**



ಸಂಪುಟ ೨೩] ಜುಲೈ ೧೯೯೨ [ಸಂಚಿಕೆ ೭

# ವಿಷಯಸೂಚಿ



ಮುಖಚಿತ್ರ ತಿರುಮಲೆಯಲ್ಲಿ ಆನಿವರ ಆಸ್ಥಾನ
ಹಿಂಬದಿಯಲ್ಲಿ ಆನಿವರ ಆಸ್ಥಾನದಂದು ಸಂಜೆ ಪುಷ್ಪಪಲ್ಲಕ್ಕಿ
ಒಳಗಡೆ (1) ಶ್ರೀ ರಾಮಾನುಜಾಚಾರ್ಯರ ಜಯಂತಿ – ತಿರುಪತಿಯಲ್ಲಿ
(2) ಶ್ರೀ ರಾಮಾನುಜಾಚಾರ್ಯರ ಜಯಂತಿ ಶ್ರೀ ಪೆರಂಬುದೂರು, ಮೇಲುಕೋಟೆಗಳಲ್ಲಿ



# ಸಂಪಾದಕೀಯ

ಅಜ್ಞಾನದ ಅಂದಕಾರದಿಂದ ಬೆಳಕಿನ ಬಯಲಿನೆಡೆಗೆ ಕರದೊಯ್ಯುವನನ್ನು ಗುರುವೆಂದರು ಹಿರಿಯರು ತಾಯಿ ತಂದೆಯರ ನಂತರ ಆಚಾರ್ಯನನ್ನು ದೇವರು ಎಂದರು ಗುರುವಿಗೆ ನಮಸ್ಕರಿಸುವಾಗ ಅವನು ಬ್ರಹ್ಮನೆಂದೂ, ಈಶ್ವರನೆಂದೂ, ವಿಷ್ಣುವೆಂದೂ ಗುರುತಿಸಿ ನಮಿಸಿದರು ಕನ್ನಡದ ಕವಿ ಸಂತ ಋಷಿಗಳು ಈ ಪರಂಪರೆಯ ಸತ್ಯವನ್ನು ಪ್ರಾತಿನಿದಿಕವಾಗಿ ತಿಳಿಸುತ್ತ ಒಂದಕ್ಷರವನ್ನು ಕಲಿಸಿದಾತ ಕೂಡ ಗುರು ಗುರುವಿನ ಗುಲಾಮನಾಗುವನಕ ದೊರಕದಣ್ಣ ಮುಕುತಿ, ತಂದೆಗೂ ಗುರುವಿಗೂ ಒಂದು ಅಂತರವಿದೆ ಗುರುವು ಮೋಕ್ಷಮಾರ್ಗವನ್ನೇ ತೋರಿಸುತ್ತಾನ ಎಂದೆಲ್ಲ ಹೇಳುತ್ತ ಗುರುವಿನ ಗುರುತನವನ್ನು, ಗುರುತನ್ನು, ಕಣ್ಣಾಗಿಸಿದರು

ಇಲ್ಲಿ ಯಾರು ಗುರುವೆಂಬುದು ಅಗತ್ಯಪ್ರಶ್ನೆ ಶಿಷ್ಯ ವಿತ್ತಾಪಹಾರಕರಲ್ಲ, ಶಿಷ್ಯ ಚಿತ್ತಾಪಹಾರಕರು, ಶಿಷ್ಯದೋಷ ತನಗೇ ಸುತ್ತಿಕೊಳ್ಳುವುದೆಂಬ ಪ್ರಜ್ಞೆಯಿದ್ದವರು ಶಾಪಾನುಗ್ರಹ ಶಕ್ತರಾದರೂ ಅನುಗ್ರಹಿಸುವರೇ ವಿನ ಶಪಿಸುವವರಲ್ಲದವರು

ಪರಾಶರ ಪುತ್ರನಾದ ಶ್ರೀ ಕೃಷ್ಣದ್ವೈಪಾಯನ ವ್ಯಾಸ ಮೇಲೆ ಹೇಳಿದ ಒಬ್ಬ ಗುರು ಗೋಜಲು ಗೋಜಲಾಗಿದ್ದ ವೇದಗಳನ್ನು ವಿಂಗಡಿಸಿ ಒಂದೊಂದನ್ನೂ ಒಬ್ಬೊಬ್ಬ ಶಿಷ್ಯನಿಗೆ ಮನಗಾಣಿಸಿ ಅವರನ್ನು ತಜ್ಞರನ್ನಾಗಿಸಿದವ ಮಹಾಬಾರತವನ್ನು ಹೇಳಿ ದರ್ಮದ ಸೂಕ್ಷ್ಮವನ್ನು ವಿಸ್ತರಿಸಿದವ, ಬಾಗವತ ರಚಿಸಿ ಬಗವಂತನ ಲೀಲೆಯನ್ನು ತಿಳಿಸಿದವ ಇಷ್ಟಾದರೂ ಎರಡೂ ಕೈಯೆತ್ತಿ ದರ್ಮದ ಬಗ್ಗೆ ಹೇಳಿದರೂ ಜನ ಅದನ್ನು ಅನುಸರಿಸುತ್ತಿಲ್ಲವೆಂದು ದುಃಖಿಸಿದನು ಹೊರತು ಯಾರನ್ನೂ ಶಪಿಸದೆ ಅಗಾದ ಮಾನವಾನುಕಂಪದಿಂದ ಕೂಡಿ ಒಗತ್ತಿಗೆ ದಾರಿಯನ್ನು ಸುಗಮಗೊಳಿಸಿಕೊಟ್ಟ.

ಇರಬಹುದು ಸಾಂದೀಪನಿ, ದ್ರೋಣ, ವಿಶ್ವಾಮಿತ್ರ, ಮುಂತಾದ ಗುರುಗಳು, ಆದರ ವ್ಯಾಸ ಗುರುವಾಗಿ ಇವರೆಲ್ಲರಿಗಿಂತ ಒಂದು ಕೈ ಹಿರಿಯ ಅತ್ಯತಿಷ್ಟದಶಾಂಗುಲ, ಎಂತಲೇ ಆತನ ನೆನಪು ಗುರು ಪೂರ್ಣಿಮೆಯಂದು

ವೇದವ್ಯಾಸನಲ್ಲಿ ಇನ್ನೊಂದು ಗುಣವೂ ಇತ್ತು ಆತ ಯಾವತ್ತೂ ಯಾವುದರ ಪರವಾಗಿಯೂ ಇರಲಾರದವನು ಸರ್ವ ಸಮಬಾವ ಆತನಿಗ ಸ್ವಬಾವ ದರ್ಮದಪರವಾಗಿ ಮಾತ್ರವ ಅವನ ಮಾತು, ವಾದ, ಎಲ್ಲವೂ ಆದರಿಂದಲ ಮುಂದಿನ ಮಾನವರಾದ ಗುರುಗಳಿಗೆ ಆತ ಆದರ್ಶಪ್ರಾಯನಾದ

ಕಲಿಯುಗದಲ್ಲಿ ಗುರು ಶಿಷ್ಯನಿಗೆ ವಂದಿಸಿ ಕಲಿಸಿದೊಡೆ ಅದುದನ್ನ ದೇಕಯ್ಯ ಎಂಬುದು ಮತ್ತೊಬ್ಬ ಮಹಾಮಹಿಮ ಅಲ್ಲಮಪ್ರಬು ಹೇಳಿದ ಮಾತು ಆತ ಈ ಮಾತು ಹೇಳಿದಾನಿಂದ ಆರು ಏಳು ಶತಮಾನಗಳುರುಳಿವೆ ಶಿಷ್ಯ ಉದ್ಧಟನಾಗುವುದು ಒಂದು ಕಡೆಯಾದರೆ ಸರಕು ಕಡಮೆಯಾದ ಗುರು ಮತ್ತೊಂದು ಕಡೆ, ಎಂತಲೇ ಈ ಪರಿಸ್ಥಿತಿ ಅಂದಿಗಿಂತ ಇಂದು ಹೆಚ್ಚು ಸ್ಪಷ್ಟವಾಗಿದೆ ಗುರು ಗುರುವಾಗಲು ಪ್ರಯತ್ನಿಸದೇಕು ಶಿಷ್ಯ ಕಲಿಯುವ ಆಸಕ್ತಿ ವಿನಯಗಳನ್ನು ಹೊಂದದೇಕು ಇಬ್ಬರೂ ಗೆಲ್ಲುವ ಒಂದು ಕ್ರೀಡೆ ಗುರುಶಿಷ್ಯರಲ್ಲಿನದು ಗುರು ಹೇಳಿಗದ್ದರೆ ಶಿಷ್ಯ ತಿಳಿದು ಗೆಲ್ಲುತ್ತಾನೆ ವೈದ್ಯರೋಗಿಯ ಸ್ಪರ್ಶದಂತೆ, ಬಕ್ತ ಬಗವಂತನ ಸಂಬಂದದಂತೆ ಅದನ್ನು ಗುರುಪೂರ್ಣಿಮೆಯಂದು ಮನಗಾಣುವ ಪ್ರಯತ್ನವಾಗದೇಕು



# ಅನುಭವಗಮ್ಯ

--ಸಂತಹರಿಹರಾನಂದಸರಸ್ವತೀ

ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಾರೆ "ಹಕ್ಕಿಯೊಂದು ತನ್ನ ರಕ್ಕೆಯನ್ನು ಬಿಚ್ಚಿಕೊಂಡು, ನಿರ್ಮಲವಾದ ಅನಂತವಾದ ಆಕಾಶವನ್ನು ಕಂಡು ಎಷ್ಟು ಎತ್ತರಕ್ಕೆ ಹಾರಿದರೂ ಅದು ಒಂದಲ್ಲ ಒಮ್ಮೆ ಭೂಮಿಗೆ ಬರಲೇಬೇಕು. ಹಾಗೆಯೇ ಎಲ್ಲಿಯವರೆಗೆ ಮಾನವ "ದೇವರಿಲ್ಲ ದೇವರಿಲ್ಲ"ವೆಂದು ಹೇಳುತ್ತಿದ್ದರೂ ಅವನ ಜೀವಿತದಲ್ಲಿ ಒಮ್ಮೆಯಾದರೂ, ಭಗವಂತನ ಅಸ್ತಿತ್ವವನ್ನು ಒಪ್ಪಿಕೊಳ್ಳುತ್ತಾನೆ. ಈ ವಿಷಯದಲ್ಲಿ ನಾವು ವೈಜ್ಞಾನಿಕವಾಗಿ ಚಿಂತಿಸಿದರೂ, ಒಂದು ಅಂಶ ಸ್ಪಷ್ಟವಾಗುತ್ತದೆ. ಯಾವ ವಸ್ತುವೂ ಈ ಸೃಷ್ಟಿಯಲ್ಲಿ ದೃಷ್ಟಿಗೋಚರವಾಗಬೇಕಾದರೆ ಅಥವಾ ತಾನು ಅಸ್ತಿತ್ವವನ್ನು ಪಡೆಯಬೇಕಾದಲ್ಲಿ ಅದರ ಹಿಂದೆ ಒಂದು (ಕಾಣದ) ಕೈಯ ಚಳಕ ಇದ್ದೇ ಇರುತ್ತದೆ. ಇದರ ಅರ್ಥ ಕಾರಣವಿಲ್ಲದೆ ಕಾರ್ಯವಿಲ್ಲವೆನ್ನುವುದು. ಅದ್ವೈತ ಸಿದ್ಧಾಂತ ಪ್ರತಿಪಾದಕರಾದ ಭಗವಾನ್ ಶ್ರೀ ಶಂಕರಾಚಾರ್ಯರು "ಕಾರಣ" ಮತ್ತು "ಕಾರ್ಯ"ವನ್ನು ಕುರಿತು ತಮ್ಮ ಭಾಷ್ಯದಲ್ಲಿ "ಅನನ್ಯತ್ವಾತ್" ಎಂದಿದ್ದಾರೆ. ಒಂದಕ್ಕೊಂದು ಪೂರಕವಾಗಿದೆಯೇ ವಿನಹ ಒಂದನ್ನು ಬಿಟ್ಟು ಒಂದಿಲ್ಲ. ಎಂದರೆ ಈ ಸೃಷ್ಟಿಯ ಹಿಂದೆ ಕಾಣದ ಕೈಯೊಂದು ಅತಿ "ಸೂಕ್ಷ್ಮ ಸಂವೇದನೆಯಿಂದ, ಕುಶಲತೆಯಿಂದ ಕಾರ್ಯನಿರ್ವಹಿಸುತ್ತಿದೆ ಎಂದಾಯಿತು. ಚರಾಚರ ಜಗತ್ತಿನ ಅಸ್ತಿತ್ವಕ್ಕೆ ವ್ಯಾಪಾರಕ್ಕೆ ಕಾರಣವಾಗಿರುವ ಆ ಅವ್ಯಕ್ತಶಕ್ತಿಯೇ "ಪರಬ್ರಹ್ಮ" ಎಂದು ಕರೆಯಲ್ಪಡುತ್ತದೆ. ಅದು ಇಲ್ಲದ ಈ ಜಗತ್ತೇ ಇಲ್ಲ. ಈ ಸೃಷ್ಟಿಯೆಲ್ಲವೂ ಅದರ ಅಧೀನ. ಅದೊಂದು ಅತಿ ಗಹನವಾದ, ಮತ್ತು ಸ್ವಾನುಭವಕ್ಕೆ ಮಾತ್ರ ಗೋಚರಿಸುವ ದಿವ್ಯಶಕ್ತಿ. ಅದು ಇಂದ್ರಿಯ ಮನಸ್ಸು ಬುದ್ಧಿಗಳ ಆಚೆಗಿದೆ. ಎಂದರೆ ಇವುಗಳಿಗೆ ನಿಲುಕದ್ದು ಎಂದರ್ಥ. ಅದು ಅಚಿಂತ್ಯವೂ, ಅವ್ಯಕ್ತವೂ, ಅನಿರ್ದೇಶ್ಯವೂ ಆಗಿದೆ. 'ಅಚಿಂತ್ಯಂ' ಎಂದರೆ ಮನಸ್ಸಿಗೆ ವಿಷಯವಲ್ಲದ್ದು. 'ಅವ್ಯಕ್ತಂ' ಇಂದ್ರಿಯಗಳಿಗೆ ಗೋಚರವಲ್ಲ. ಆದ್ದರಿಂದ "ಅನಿರ್ದೇಶ್ಯಂ" ನಿರ್ದೇಶಿಸುವುದಕ್ಕೆ ಬರುವುದಿಲ್ಲ. "ಇದಮಿತ್ಥಂ" ಎಂದು ಬೆಟ್ಟು ಮಾಡಿ 'ಇದೇ' ಎಂದು ತೋರಿಸಲು ಬರುವುದಿಲ್ಲ. ಈ ಅದ್ಭುತ ಸೃಷ್ಟಿಕಾರ್ಯತಂತ್ರವನ್ನು (ನಾವು) ಗಮನಿಸಿದಾಗ, ನಾವು, ಇದರ ಹಿಂದೆ ಇರುವ ಆ ಶಕ್ತಿಯನ್ನು ಅತ್ಯಾಶ್ಚರ್ಯಕರವೆಂದು ಭಾವಿಸುತ್ತೇವೆ. ಅದು ಸಹಜ. ನಾವು ಅದನ್ನು ಇದೆ ಎಂದಾದರೂ ವಾದಿಸಬಹುದು ಇಲ್ಲವೆಂದಾದರೂ ವಾದಿಸಬಹುದು, ಅದು ಇರುವುದಂತೂ ನಿಜ. "ವೇದ ಉಪನಿಷತ್ತುಗಳ ಸಾರಭೂತ ತತ್ವ"ವೂ ಇದೇ ಆಗಿದೆ. ಈ ಸೃಷ್ಟಿಯ ಆರಂಭದಿಂದಲೂ ಅದರ ಹುಡುಕಾಟವನ್ನು ಆರಂಭಿಸಿದ ಮಾನವ ಇನ್ನೂ ಹುಡುಕುತ್ತಲೇ ಇದ್ದಾನೆ. ಆದರೆ ನಮ್ಮ ಭವ್ಯ ಭಾರತದ ಪರಂಪರೆಯ ಹರಿಕಾರರೆನ್ನಿಸಿದ ಋಷಿ ಮುನಿ ಸಂತರು 'ಶ್ರುತಿ' ಎಂದರೆ, ವೇದದ ದಿವ್ಯಸಂದೇಶವನ್ನು ಆದರಿಸಿ ತಮ್ಮ ನಿರಂತರ ತಪಶ್ಶಕ್ತಿಯ ಪ್ರಭಾವದಿಂದ ಅಂತರ್ಮುಖಿಗಳಾಗಿ ಆ ಅದ್ಭುತತತ್ವದ (ಪರಬ್ರಹ್ಮದ) ದರ್ಶನ ಮಾಡಿ, 'ದಾರ್ಶನಿಕ'ರೆನ್ನಿಸಿಕೊಂಡರು. ಬದಲಾದ ಜೀವನವಿಧಾನದಲ್ಲಿ, ಬರುಬರುತ್ತಾ ಮಾನವ 'ಭಾವಜೀವಿಯಾಗುತ್ತ', ಸೃಷ್ಟಿಯ ಹಿಂದೆ ಇರುವ ಆ 'ಸಾತ್ವಿಕ ಸತ್ವದ' ದರ್ಶನವನ್ನು ಮಾಡಲೇಬೇಕೆಂದು ಸಂಕಲ್ಪಿಸಿ, ತನ್ನ ಭಾವನಾಪ್ರಪಂಚಕ್ಕೆ ಅಳವಡುವಂತೆ, ಅದಕ್ಕೊಂದು ರೂಪವನ್ನು, ಆಕಾರವನ್ನು ಕಲ್ಪಿಸಿ, ಹೆಸರುಕೊಟ್ಟು, ನಾಮರೂಪಗಳ ಕಲ್ಪನಾ [illegible]ದಲ್ಲಿ ತನ್ನ "ನಂಬುಗೆ ಭಕ್ತಿ, ಶ್ರದ್ಧೆಗಳನ್ನು ಪ್ರಕಟಿಸುತ್ತಾ ಬಂದ. ಅಂದಿನಿಂದ 'ಪ್ರತಿಮಾ' ಪೂಜೆ, ಅಥವಾ 'ವಿಗ್ರಹಾರಾಧನೆ'ಯು ಆರಂಭವಾಯಿತು. ಈ ವಿಶಿಷ್ಟವಾದ, ಮೂರ್ತಿ ಪೂಜೆಯಲ್ಲಿ "ಭಕ್ತಿ"ಯು ಪ್ರಾಧಾನತೆಯನ್ನು ಪಡೆಯಿತು. ಆ ಮೂರ್ತಿಯನ್ನೇ ಈಶ್ವರನೆಂದು ಕರೆದರು. ಈಶ್ವರನೆಂದರೆ 'ಒಡೆಯ'ನೆಂದೂ, "ಈಪ್ಸಿತಾರ್ಥ"ವನ್ನು ಕೊಡುವವನೆಂದೂ ಅರ್ಥವಿದೆ. ಮೊದಲು ಅವನ ಅಸ್ತಿತ್ವದಲ್ಲಿ ನಮಗೆ 'ನಂಬಿಕೆ' ಬಂದರೆ 'ಭಕ್ತಿ' ತಾನಾಗಿಯೇ ಬರುತ್ತದೆ. ತನ್ನೆದುರು ಇರುವ ಮೂರ್ತಿಯನ್ನು (ದೇವರು) 'ಭಗವಂತ'ನೆಂದು ಗುರ್ತಿಸಿಕೊಂಡು ತನಗೂ ಮತ್ತು ತನ್ನ ಕಲ್ಪನೆಯ ಸಾಕಾರಮೂರ್ತಿಗೂ ಅತ್ಯಂತ ಸನಿಹದ ಸಂಬಂಧವನ್ನು ಕಲ್ಪಿಸಿಕೊಂಡು ತನ್ನೆಲ್ಲಾ ನೋವು



ನಲಿವುಗಳೆ ನಿದ್ದರೂ ತಾನು ನಂಬಿದ ಆ ದೈವದಲ್ಲಿ ನಿವೇದಿಸಿಕೊಳ್ಳುತ್ತಾ, ಮಾನಸಿಕಸಂತೃಪ್ತಿ ಯನ್ನು ನಿರಿ ಕ್ಷಿಸಿ ಆಶಾವಾದಿಯಾಗಿ ಜೀವಿಸುತ್ತ ಬಂದ ಕ್ರಮೇಣ ಆ ಮೂರ್ತಿಗೆ ಅವತಾರಗಳ ಕಲ್ಪನೆಯನ್ನಾರೊ ಪಿಸಿ 'ಯುಗಾವತಾರೀ' ಎಂದು ಕರೆದು ಅವನ ಅವತಾರ ವಿಶೆ ಷಗಳನ್ನು ಮತ್ತು ಆ ದಯಾಮಯಿ ಮೂರ್ತಿಯ, ಅವತಾರ ಪುರುಷನ ಕಷೆಗೆ ಪಾತ್ರರಾದವರನ್ನು ಭಕ್ತಾಗ್ರೇಸರರೆಂದೂ, ಭಾಗವತೊ ತ್ತಮರೆಂದೂ ಭಾವಿಸಿ ಅಂತಹ ಭಕ್ತೆ ಮತ್ತು ಭಗವಂತನ ಸಂಬಂದವನ್ನು ಕುರಿತು ಸವಿ ಸ್ತಾರವಾದ ಕದಾನಕಗಳನ್ನು ಶ್ರವಣ ಮಾಡುತ್ತಾ, ಮಾಡುತ್ತಾ, ಅವನ ಕೀರ್ತಿ ಮಹಿಮಾತಿಶಯಗ ಳನ್ನು ತನ್ನಲ್ಲಿ ತುಂಬಿಕೊಂಡು, ತಾನೂ ಕೀರ್ತಿಸುತ್ತಾ ಬಂದ ಹಿ ಗೆ ಭಗವಂತ ಮತ್ತು ಭಾಗವತರ ಸಂಬಂ ದವು ಅವಿನಾಭಾವ ಸಂಬಂದವಾಗಿ ಬೆಳೆಯಿತು ಇಂದು 'ದೇವರ ಅಸ್ತಿತ್ವವು' ಕೇವಲ ಅನಿಸಿಕೆಯಾಗಿ ಯಾಗಲೀ, ಕಲ್ಪನೆಯಾಗಿ ಆಗಲಿ ಮಾತ್ರವೇ ಉಳಿ ಯದೇ, "ಭಾವುಕರ ಹೃನ್ಮನಗಳಲ್ಲಿ ಅದು (ಸಾಕಾರ ವಾಗಿ) ಸಾಕಾರಗೊಂಡ', ಒಂದು ಅತ್ಯುತ್ತಮ ಸ್ಥಾನ ವನ್ನು ಪಡೆದಿರುವ ಪರಮಪವಿತ್ರಮೂರ್ತಿಯಾ ಗಿದೆ ಪ್ರದಮತ ಪ್ರಾರಂಭದ ಏಕದೇವೋಪಾಸ ನೆಯಿಂದ ಬಹುದೇವೋಪಾಸನೆಯವರೆಗೆ ವಿಸ್ತಾ ರವನ್ನು ಪಡೆದು, ಸರ್ವಶ್ರೇಷ್ಠವಾದ ಆ ಅತ್ಯದ್ಭುತ ಶಕ್ತಿಯು "ದೇವ ಪಟ್ಟ'ವನ್ನು ಹೊಂದಿ, ಇಡಿ ಸೃಷ್ಟಿಯ ಸರ್ವಸ್ವಾಮ್ಯವನ್ನು ತನ್ನ ವಶದಲ್ಲಿರಿಸಿ ಕೊಂಡು, ಜೀವನವ್ಯಾಪಾರಕ್ಕೆ ಚಾಲನ ನೀಡುತ್ತಿ ರುವ ಅದನ್ನು ಕುರಿತು – ಅದು ಒಂದೇ ಆದರೂ ಬಲ್ಲವರು ಬಹುವಿದವಾಗಿ ಕರೆಯುತ್ತಾರೆ (ಏಕಂ ಸತ್ ವಿಪ್ರಾ ಬಹುದಾವದಂತಿ) "ದೇವನು ಒಬ್ಬ ನಾಮ ಹಲವು' ಹೀಗೆ ಕಲ್ಪಿತವಾದ ಹತ್ತು ಹಲವು ನಾಮ ರೂಪಗಳಲ್ಲಿ, ಇಂದು 'ಅವತಾರ ಪುರು ಷರೆಂದೂ ಮಾತ್ರವಲ್ಲ, ಪುರುಷೋತ್ತಮರೆಂದೂ ಗುರುತಿಸಲ್ಪಟ್ಟು ಪರಂಪರೆಯಿಂದ ಬಹು ಜನರ

ಬಲ್ಲವರ ಆರಾದ್ಯದೈವವೆಂದೇ ಕರೆಸಿಕೊಳ್ಳುತ್ತಿ ರುವ 'ಶ್ರೀರಾಮ' ಮತ್ತು 'ಶ್ರೀಕೃಷ್ಣ' ರ ಹೆಸರು ಪ್ರದಮತ ಸೇರ್ಪಡೆಯಾಗಿದೆ ಎನ್ನುವುದು ಸರ್ವ ವಿದಿತ ಈ ಮೂರ್ತಿದ್ವಯರನ್ನು ಜ್ಞಾನಿಗಳಾದ ವ್ಯಾಸ ವಾಲ್ಮೀಕಿಯರಾದಿಯಾಗಿ ಪ್ರಜ್ಞಾವಂತ ಭಾಗವತ ಶ್ರೇಷ್ಠರು "ಸರ್ವಜ್ಞರೆಂದೂ ಸತ್ಯ ಸಂಕಲ್ಪರೆಂದೂ ಕರೆದು, ಅವರ ಜೀವನಾದರ್ಶಗ ಳನ್ನು ವಿಸ್ಕೃತ "ಕದಾರೂಪ' ವಾಗಿ ಮನುಕುಲದ ಮುಂದಿಟ್ಟು "ಭಾವುಕ ಭಕ್ತರ, ಬಾಗವತರ" ನಂಬಿ ಕೆಗೆ ಶ್ರದ್ಧೆಗೆ, ಆತ್ಮವಿಶ್ವಾಸಕ್ಕೆ ಜೀವತುಂಬಿ ದ್ದಾರೆ" ಏನೇ ಇದ್ದರೂ ಆ ಪರಮಾತ್ಮ ತತ್ವವು ಮೂರ್ತವಾಗಿರಲಿ, ಅಮೂರ್ತವೇ ಆಗಲೀ ಅದು ಸ್ವಾನುಭವೈಕಗೋಚರವೆಂಬುದಂತು ಸತ್ಯ ಪ್ರಸ್ತುತ ಒಂದು ಉದಾಹರಣಾತ್ಮಕ ಉಪಕದೆಯನ್ನು ನಾವು ನೋಡೋಣ

ಒಮ್ಮೆ ಓರ್ವವಿದ್ಯಾರ್ದಿಯು ಶ್ರೀಸ್ವಾಮಿ ವಿವೇಕಾ ನಂದರನ್ನು ಭೇಟಿಯಾಗಿ ಅವರೊಂದಿಕೆ ಮಾತ ನಾಡುತ್ತಾ, ಸ್ವಾಮಿಜೀ, ತಾವು ದೇವರನ್ನು ಕಂಡಿ ದ್ದೀರಾ? ಎಂದು ಪ್ರಶ್ನಿಸಿದ ಓಹೋ! ಕಂಡಿ ದ್ದೇನೆ ಮಗು ನಿನ್ನನ್ನು ನಾನು ಎಷ್ಟು ವಾಸ್ತವದಲ್ಲಿ ನೋಡುತ್ತಿದ್ದೇನೆಯೋ ಅಷ್ಟೇ ವಾಸ್ತವದಲ್ಲಿ ನೋಡಿ ದ್ದೇನೆ, ಮಾತ್ರವಲ್ಲ ನೋಡುತ್ತಿದ್ದೇನೆ ಎಂದುತ್ತರಿಸಿ ದರು ಸ್ವಾಮಿಜಿ ವಿದ್ಯಾರ್ದಿ ಹಾಗಾದರೆ ನನಗೂ 'ದೇವ'ರನ್ನು ತೋರಿಸುತ್ತೀರಾ? ಎಂದು ಪ್ರಶ್ನಿಸಿದ ಮತ್ತೆ ಅದು ಹಾಗೆಲ್ಲಾ ಒಬ್ಬರಿಂದ ಒಬ್ಬರಿಗೆ ತೋರಿ ಸುವುದಕ್ಕೆ ಬರುವುದಿಲ್ಲವಪ್ಪಾ. ಪ್ರತಿಯೊಬ್ಬರೂ ಆ ದೇವರನ್ನು ತಮ್ಮ ತಮ್ಮ ಅನುಭವದಲ್ಲಿಯೇ ಕಾಣಬೇಕು ಅಂತರ್ಮುಖಿಗಳಾಗಿ ನೋಡಬೇಕು ಅದಕ್ಕೆ ತೀವ್ರವಾದ ಸಾದನೆ ಮಾಡಬೇಕು ಅಚಲ ವಾದ ನಂಬುಗೆ, ಭಕ್ತಿ ಶ್ರದ್ಧೆ ಉತ್ತಮವಾದ ನಡೆ

ನುಡಿಗಳಿರಬೇಕು ವಿಶ್ವಾಸ ಮುಖ್ಯವಾಗಿಬೇಕು ಎಂದು ಉತ್ತರಿಸಿದರು ಸ್ವಾಮಿ ವಿವೇಕಾನಂದರು ವಿದ್ಯಾರ್ದಿಯು ಅಷ್ಟಕ್ಕೆ ಒಪ್ಪಲಿಲ್ಲ ಸ್ವಾಮಿಜೀ, ಜಾರಿಕೊಳ್ಳುವುದಕ್ಕೆ ಏನೇನೋ ಸಾದನೆ ಭಕ್ತಿ

ಅನುಭವ ಎಂದು ನೆಪಹೇಳುತ್ತಿದ್ದೀರಿ ನನಗೆ ಅದೆಲ್ಲ ಗೊತ್ತಿಲ್ಲ ಈಗ ತಾವು ನನಗೆ ದೇವರನ್ನು ತೋರಿಸಲೇಬೇಕು ಎಂದು ಹಠಹಿಡಿದು ನಿಂತ ವಿದ್ಯಾರ್ದಿ ಅದು ಅನುಭವವೇದ್ಯವೆನ್ನುವುದನ್ನು ತಿಳಿಹೇಳುವುದು ಹೇಗೆ? ಚಿಂತಿಸಿದ ಸ್ವಾಮಿಜೀಯ ವರು, ಆ ವಿದ್ಯಾರ್ದಿಯ ಕೆನ್ನೆಗೆ ಒಂದು ಬಲವಾದ ಏಟು ಬಾರಿಸಿದರು ವಿದ್ಯಾರ್ದಿಯು ತನ್ನ ಕೆನ್ನೆಸವರಿ ಕೊಳ್ಳುತ್ತ ವಿಷಣ್ಣನಾದ ಏನಾಯಿತು ಮಗು ಈಗ ಚೆನ್ನಾಗಿದ್ದೆಯಲ್ಲಾ? ಸ್ವಾಮಿಜೀಯವರು ಪ್ರಶ್ನಿಸಿ ದರು ತಾವು ಹೊಡೆದದ್ದರಿಂದ ವಿಪರೀತ ನೋವಾ ಯಿತು ಗುರುದೇವ ಇದು ವಿದ್ಯಾರ್ದಿಯಿಂದ ಬಂದ ಉತ್ತರ ಏನು? ನೋವಾಯಿತೇ? ಎಲ್ಲಿ ಆ ನೋವು ಹೇಗಿದೆ ತೆಗೆದುತೋರಿಸು ನಾನೂ ನೋಡುತ್ತೇನೆ ಎಂದು ಕೇಳಿದಸ್ವಾಮಿ ವಿವೇಕಾ ನಂದರ ಮಾತಿಗೆ ನಗುತ್ತಾ ವಿದ್ಯಾರ್ದಿಯು, ಗುರು ದೇವಾ, ನೋವನ್ನು ಎಲ್ಲಿಯಾದರೂ ತೆಗೆದು ತೋರಿಸಲು ಸಾದ್ಯವೇ? ಎಂದು ಗೇಲಿಮಾಡಿದ ಸ್ವಾಮಿವರ್ಯರನ್ನು ನೋಡಿದೆಯಾ ಮಗು! ನಿನಗೆ ಹೊಡೆದದ್ದು ನಾನು ನೋವಾದದ್ದು ನಿನಗೆ ಅದು ನಿನ್ನ ಅನುಭವ ಹಾಗೆಯೇ ದೇವರನ್ನು ಯಾರೂ ಯಾರಿಗೂ ತೋರಿಸಲಾಗುವುದಿಲ್ಲ ಅದೂ ಅನು ಭವವೇದ್ಯವೇ ಎಂದಾಗ ವಿದ್ಯಾರ್ದಿ ತಾನೂ ಮೂಕ ನಾದ ಸ್ವಾಮಿಜೀಯವರಲ್ಲಿ ಕ್ಷಮೆಕೇಳಿದ

"ಶ್ರೀವಿಷ್ಣು ವಿಶ್ವಾದಿ ಮೂಲಮಾಯಾಲೋಲ
ದೇವಸರ್ವೇಶಪರ ಬೊಮ್ಮನೆಂದು ಜನಂ
ಆವುದನುಕಾಣದೊಡಮಳ್ತಿಯಿನಂಬಿಹುದೊ
ಆ ವಿಚಿತ್ರಕೆ ನಮಿಸೋ ಮಂಕುತಿಮ್ಮ" *

# ತುಂಬಿದ ಕೊಡ

ವಿದ್ವಾನ್ ಬ ನ ಗುಂಡೂರಾವ್

"ಧರ್ಮನಂದನನು ಆಚರಿಸಿದ ಅಶ್ವಮೇಧ ಯಾಗಕ್ಕೆ ಹರಿಕೃಪಾಪಾತ್ರ, ನರವರ ಚಂದ್ರಹಾಸನು, ಬಿಜಯಮಾಡಿಸಿದ್ದು ಎಂತಹ ಸೋಜಿಗ?

"ಸೋಜಿಗವೇನಿದರಲ್ಲಿ? ಯಜ್ಞದ ವಿಚಾರ ಇಲ್ಲಿ ಮುಖ್ಯವಲ್ಲ ಪುಣ್ಯಾತ್ಮ ಧರ್ಮನಂದನನ ದರ್ಶನ, ಸಾಕ್ಷಾತ್ ಶ್ರೀಕೃಷ್ಣನ ಸಂದರ್ಶನ ಇದು ಪರಮಯೋಗಿಗಳಿಗೆ ಮಾತ್ರ ಲಭ್ಯವಾಗುವ ಪರಮ ಸೌಭಾಗ್ಯ ಮಹಾರಾಜ'

"ನಿಜ ಮಹರ್ಷಿ ಅಶ್ವಮೇಧದ ಕುದುರೆ ಹಿಡಿದು ಕಟ್ಟುವುದು, ಸೋಲು ಗೆಲುವುಗಳು ಕೀರ್ತಿ ಪ್ರತಿಷ್ಠೆಗಳು ಯುದ್ಧರಂಗದ ಪರಾಕ್ರಮ ಇದೆಲ್ಲ ಕ್ಷುಲ್ಲಕ ವಿಚಾರ ಪರಮಾತ್ಮನ ದರ್ಶನ ಭಾಗ್ಯದ ಮುಂದೆ ಯಾವುದು ತಾನೆ ದೊಡ್ಡದು? "ಯೋ ವೈ ಭೂಮಾತತ್ಸುಖಂ ನ ಅಲ್ಪೇ ಸುಖಮಸ್ತಿ" ಎಂಬ ಉಪನಿಷದ್ವಾಣಿ ರಾಜರ್ಷಿ ಚಂದ್ರಹಾಸನಿಗೆ ಕೇವಲ ಸಿದ್ಧಾಂತವಲ್ಲ ನಿತ್ಯಾನುಭವವೆಂದೇ ಕಾಣುತ್ತದೆ

"ಹೌದು ಮಹಾರಾಜ ಯಾರ ವರದ ಹಸ್ತ ಆತನನ್ನು ಬಾಲ್ಯದಿಂದಲೂ ಕಣ್ಣನ್ನು ಕಾಪಾಡುವ ರೆಪ್ಪೆಯಂತೆ ಕಾಪಾಡಿತು, ಯಾರ ಅವ್ಯಾಜಪ್ರೇಮ, ಆತನನ್ನು ಕ್ಷಣ ಕ್ಷಣವೂ ಬಂದೊದಗಿದ ವಿಪತ್ಪರಂಪರೆಗಳಿಂದ ಸಂರಕ್ಷಿಸಿತು - ಆ ಪ್ರೇಮ ಮೂರ್ತಿ ಭಗವಂತನ ಸನ್ನಿಧಿಯನ್ನು ತಾನ ಉಪನಿಷತ್ತು ಭೂಮ ಎಂದದ್ದು" ಎಲ್ಲ ನಿಧಿಗಳಿಗಿಂತ ದೊಡ್ಡದು ಆ ಸನ್ನಿಧಿ"

ಈ ಸಂಭಾಷಣೆ ಗಂಗಾತೀರದ ಪ್ರಶಾಂತ ವಾತಾವರಣದಲ್ಲಿ ನಡೆಯುತ್ತಿದೆ ಈ ಸಂಭಾಷಣೆಯಲ್ಲಿ ಭಾಗವಹಿಸಿರುವ ಮಹಾನ್ ವ್ಯಕ್ತಿಗಳು ಭಾರತೀಯರಿಗೆ ಕೆಲವು ಜೀವನಾದರ್ಶಗಳನ್ನು ಹಾಕಿಕೊಟ್ಟ ಪುಣ್ಯಜೀವಿಗಳು ಒಬ್ಬಾತನ ಹೆಸರು ಜೈಮಿನಿ ಇನ್ನೊಬ್ಬಾತನ ಹೆಸರು ಜನಮೇಜಯ

ಜೈಮಿನಿ ಹೇಳಿದರು -

"ರುಕ್ಮಿಣೀ ಮುಖಪಂಕಜ ಭ್ರಮರನಾದ ಶ್ರೀಕೃಷ್ಣನ ಜತೆಯಲ್ಲಿ ಪಂಚಮಹಾರಥಿಕರಿದ್ದಾರೆ -- ಶುಭ್ರವಾಹನ ಮಯೂರಧ್ವಜ ಬಭ್ರುವಾಹನ ಪ್ರದ್ಯುಮ್ನ ಹಂಸಕ ತು" ಸಾಗರತೀರದಲ್ಲಿ ಒಂದು ಪರಮಾದ್ಭುತ ಸಂಗತಿ ನಡಯಿತು ಜನಮೇಜಯ

ಅದೆ ಸಂದು ಕೇಳಬಹುದ ಪೂಜ್ಯರೆ ?

"ನೋಡು, ಪಾರ್ಥನ ಹಿಂದ ಎಂದ ಈ ಗುಂಪು ಶೌರ್ಯಸಾಹಸಗಳ ಮೂರ್ತೀಭವಿಸಿದಂತಿತ್ತು ಜನಮೇಜಯ ಇವರ ಸಾಗರೋಪಮ ಸೈನ್ಯಗಳೊಂದುಕಡೆ ಅವರ ಸಾಹಸಕ್ಕೆ ಸವಾತಿ ಸೆಮ ಆರ್ಭಾಟ ಮಾಡುತ್ತ ದೂರ್ಗರೆಯುತ್ತಿದ್ದ ಮಹಾಸಾಗರ ಒಂದು ಕಡೆ" ಎರಡು ಸಾಗರಗಳ ನಡುವೆ ನೀಲಮೇಘಶ್ಯಾಮ ಕರುಣಾಸಮುದ್ರ ಕೃಷ್ಣ ಈ ದೃಶ್ಯವನ್ನು ಕಲ್ಪಿಸಿಕೊಂಡರೇನೇ ಮೈಮನಗಳು ಪುಲಕಿತವಾಗುತ್ತವೆ ಇನ್ನೊಂದು ವಿಚಿತ್ರ ಸಂಗತಿ ಎಂದರೆ ಸಾಗರ ತೀರದಲ್ಲಿ ಒಬ್ಬ ಮಹರ್ಷಿ ಧ್ಯಾನಸ್ಥನಾಗಿ ಕುಳಿತಿವಾನೆ ಆತನ ಬಳಿ ಒಣಗಿಹೋದ ಆಲದೆಲೆಗಳ ರಾಶಿ ಇದೆ ಬಿಸಿಲು ರುಳಕ್ಕೋ ಏನೋ ಆತ ತಲೆಯಮೇಲೆ ರಕ್ಷಣೆಗೆಂದು ಒಂದು ಚಿಂದಲಯನ್ನು ಇಟ್ಟುಕೊಂಡಿದ್ದಾನೆ ರತ್ನಖಚಿತ ಕಿರೀಟ ಮಂಡಿತರಾದ ಪಾರ್ಥಾದಿಗಳು ವಟಪತ್ರಶೋಭಿತ ಮಸ್ತಕನಾದ ಋಷಿಯನ್ನು ಕಂಡು ನಗದ ಇರಲು ಸಾಧ್ಯವೇ ? ಹಾಸ್ಯ ಮಾಡದೇ ಇರಲು ಸಾಧ್ಯವೇ ? ಧ್ಯಾನ ನಿರತ ಯೋಗಿ ಎಂಬ ಗೌರವಕ್ಕೆ ಪಾರ್ಥ ಆತನಿಗೆ ವಂದಿಸಿದರೂ ಸಹ ಸಹಜ ಕುತೂಹಲದಿಂದ ಪ್ರಶ್ನಿಸಿದ

ತಾವು ಯಾರೆಂದು ನಾನರಿತುಕೊಳ್ಳಬಹುದೇ ? ಇದೇನು ನಿಮ್ಮ ಈ ವಿಚಿತ್ರವೇಷ? ಮೊಣಕಾಲುಗಳ ಬಳಿ ಬೆಳೆದಿರುವ ಮರಗಳಲ್ಲಿ ಹತ್ತಾರು ಪಕ್ಕಿಗಳು ಗೂಡು ಕಟ್ಟಿಕೊಂಡಿವ ಮೃಗಪಕ್ಷಿಗಳು ಇದೇನು ಕಲ್ಲೋ ಬಂಡೆಯೋ ಎಂದು ಭಾವಿಸಿ, ನಿಮ್ಮ ಮೈಗ ತಮ್ಮ ಮೈಯುಜ್ಜಿ ಬಹುಶ ತಮ್ಮ ಮೈನವೆಯನ್ನು ಪರಿಹರಿಸಿಕೊಳ್ಳುತ್ತಿವೆ ನಿಮ್ಮ ಸುತ್ತ ಬೆಳೆದಿರುವ ಹುತ್ತಗಳೇನು? ಅದರಲ್ಲಿ ಹೆಡೆಯೆತ್ತಿ ಆಡುವ ಸರ್ಪಗಳೇನು? ಈ ಮಧ್ಯ ತಾವು ನಿರ್ಭಯವಾಗಿ ಕುಳಿತಿದ್ದೀರಿ ತಲೆಯ ಮೇಲೆ ರಕ್ಷಣೆಗೆಂದು ಈ ತರಗೆಲೆ ಏನು? ಇಷ್ಟು ದೇಶದೇಶಗಳನ್ನು ಸುತ್ತಿ ಬಂದೆ ನಿಮ್ಮಂತಹ ವಿಚಿತ್ರವ್ಯಕ್ತಿಯನ್ನು ನಾನೆಲ್ಲೂ ಕಾಣಲಿಲ್ಲ

ಯೋಗಿ ನಿಧಾನವಾಗಿ ಕಣ್ತೆರೆದ ಸುತ್ತಲೂ ನಿಂತಿದ್ದ ಜನರನ್ನು ನೋಡಿ ಒಮ್ಮೆ ನಕ್ಕ ಪ್ರಶ್ನೆ ಮಾಡಿದ ಪಾರ್ಥನತ್ತ ತಿರುಗಿ ನೀನಾರುಮಗು ಹುಡುಗ

ನೀನಿನ್ನೂ ಅದಕ್ಕೆ ಏನೆನೊ ಪ್ರಶ್ನೆ ಕೇಳಿದ ಎಂದ ಆ ಯೋಗಿ

"ಹುಡುಗ? ಇದೆಂತಹ ಮಾತು? ಕುರುಕ್ಷೇತ್ರ ಸಂಗ್ರಾಮರಂಗದಲ್ಲಿ ಭೀಷ್ಮ ದ್ರೋಣ ಕರ್ಣ ಜಯದ್ರಥಾದಿ ಮಹಾನು ಮಹಿಮರನ್ನು ಸಂಹರಿಸಿದ ವೀರಾಗ್ರಣಿ ಹುಡುಗನೇ ? ಕೆರಳಿಸಿಗೊಂಡ ಅರ್ಜುನ

"ನೀನು ಎಳಸು ಎಂಬುದು ಈಗ ಸ್ಪಷ್ಟವಾಯ್ತು ಮಗು, ಅದಿರಲಿ ನನ್ನ ವಿಚಾರ ಕೇಳಬಯಸಿದೆಯಲ್ಲವೆ ? ಸಂತೋಷ ಕೇಳು, ನನ್ನ ಹೆಸರು ಬಕದಾಲ್ಭ್ಯ ಚತುರ್ಮುಖ ಬ್ರಹ್ಮನಿಂದ ಹಿಡಿದು ಮೂವತ್ತೆರಡು ಮುಖಗಳ ಬ್ರಹ್ಮನವರೆಗೂ ಸಾವಿರ ಮುಖದ ಬ್ರಹ್ಮನವರೆಗೂ ಎಲ್ಲರನ್ನೂ ಕಂಡಿದ್ದೇನೆ ಇಲ್ಲಿರುವ ಕುಷ್ಪವಟ ಪತ್ರಗಳೇನು ಗೊತ್ತೆ? ಚತುರ್ಯುಗಗಳುರುಳಿ, ಕಲ್ಪ ಕಲ್ಪಾಂತರಗಳುರುಳಿ, ಮನ್ವಂತರಗಳುರುಳಿ ಹೋದಾಗ ಲೋಕದಲ್ಲಿ ಮಹಾ ಪ್ರಳಯವಾಗುತ್ತದೆ ಲೋಕಭೀಕರವಾದ ಆ ಜಲಪ್ಲಾವನದಲ್ಲಿ ಸಕಲ ಸೃಷ್ಟಿಯೂ ನಾಶವಾಗುತ್ತದೆ ಆ ಪ್ರಳಯ ಪಯೋಧಿಯಲ್ಲಿ ಆಲದೆಲೆಯಮೇಲೊಂದು ಮುದ್ದಾದ ಮಗು ತನ್ನ ಆನಂದದಲ್ಲಿ ತಾನೇ ಲೀನವಾಗಿ ಯೋಗಿ ಜನ ವಂದಿತನಾದ ತನ್ನ ಪಾದಾರವಿಂದಗಳಲ್ಲಿ ಅದೇನು ರುಚಿಯೋ ಅದೇನು ಮಾಧುರ್ಯವೋ ನೋಡಬೇಕೆಂದು ತನ್ನ ಕಾಲ್ಬೆರಳನ್ನು ತಾನೇ ಬಾಯಲ್ಲಿಟ್ಟು ಚೀಪುತ್ತ ಸಂತೋಷವಾಗಿ ಆಲದೆಲೆಯ ಮೇಲೆ ಮಲಗಿರುತ್ತದೆ ಅಂತಹ ಸಾವಿರಾರು ಮಹಾ ಪ್ರಳಯಗಳನ್ನು ನೋಡಿದ್ದೇನೆ ಈ ಆಲದೆಲೆಗಳೆಲ್ಲ ಎಣಿಸು ಆಗ ನಾನು ಕಂಡಿರುವ ಪ್ರಳಯಗಳೆಷ್ಟೆಂದು ನಿನಗರಿವಾಗುತ್ತದೆ ಒಂದೊಂದು ಪ್ರಳ

ಯವಲ್ಲಿ ಸ್ವಾಮಿ ಸಚ್ಚಿದಾನಂದ ಅಖಂಡವಸ್ತು ಮುಂಗಿದ್ದ ಒಂದೊಂದು ತುಂಬೆತೆಗೂ ಇಲ್ಲಿವೆ ಅವೆ ಈ ರಾಶಿ

ಕರಾರವಿಂದೆ ನ ಪದಾರವಿಂದಂ
ಮುಖಾರವಿಂದೆ ವಿನಿವೇಶಯಂತಂ
ವಟಸ್ಯ ಪತ್ರಸ್ಯ ಪುಟೇ ಶಯಾನಂ
ಬಾಲಂ ಮುಕುಂದಂ ಮನಸಾಸ್ಮರಾಮಿ

ಅದೆ ಸ್ವಾಮಿ ನಿಮ್ಮನ್ನಿಲ್ಲಿಗೆ ಕರೆತಂದಿದ್ದಾನೆ ಆ ಪರಾತ್ಪರ ವಸ್ತು ದರ್ಶನದಿಂದ ಅದಷ್ಟು ಸಲ ಈ ನನ್ನ ಕಣ್ಣುಗಳ ಪುಣ್ಯಪಲಿಸಿದೆಯೋ ಇಂದೂ ಸಹ ಕೃಪೆ ಮಾಡಿ ಸ್ವಾಮಿ ದರ್ಶನವಿತ್ತಿದ್ದಾನೆ ನೀವೆಲ್ಲ ಹುಡುಗರು ನಿಮಗಿದೆಲ್ಲ ತಿಳಿಯಿದು ಇನ್ನೇನು ಬೆ ಕು ಮಗು ನಿನಗೆ ನಿನ್ನ ಹೆಸರೇನಂದೆ ?

ಅರ್ಜುನ ಪಾರ್ಥ ಧನಂಜಯ ವಿಜಯ ಸಾಕು ಸಾಕು ಈ ಹೆಸರು ಈ ಕೀರ್ತಿ ಈ ದಿಗ್ವಿಜಯ ಇದೆಲ್ಲ ಸಣ್ಣ ಸಣ್ಣ ವಿಚಾರಗಳು ಅರ್ಜುನ ನೀನು ಬಿ ಷ್ಮದ್ರೋಣಾದಿಗಳನ್ನು ನಿಜ ವಾಗಿಯೂ ಕೊಂದೆಯಾ ಎದುರಿಸಿ ನಿಂತೆಯಾ? ಎಂತಹ ವಿಚಿತ್ರದ ಮಾತಾಡಿದೆ ಅದೆಷ್ಟು ಹೆಮ್ಮೆ ಯಿಂದ ಅದೆಷ್ಟು ಗರ್ವದಿಂದ ಹೇಳಿಕೊಂಡೆ ಮಗು ಇದೆಲ್ಲ ನಿನ್ನ ಚಿಕ್ಕವಯಸ್ಸಿನ ಲಕ್ಷಣಗಳು ಅರ್ಜುನ, ಬಕದಾಲ್ಭ್ಯರ ಮಾತು ಕೇಳುತ್ತ ಕೇಳುತ್ತ ಬೆಪ್ಪಾದ, ಬೆಳ್ಳಾದ

ಸಾವಿರ ಮುಖಗಳ ಬ್ರಹ್ಮನನ್ನು ತಾವು ಕಂಡಿದ್ದೀರೇನು? ಮತ್ತೆ ಅರ್ಜುನನ ಅವಿವೇಕದ ಪ್ರಶ್ನೆ

ಸುಳ್ಳು ಹೇಳಲು ಪೊಳ್ಳು ಗರ್ವದ ಮಾತಾಡಲು ನಾನೇನು ನಿನ್ನ ಹಾಗೆ ದ್ವಾಪರಯುಗದ ಮನುಷ್ಯನೇ ಪಾರ್ಥ? ಇಂತಹ ದ್ವಾಪರಯುಗಗಳು ನೂರಾರು ಸಾವಿರಾರು ನನ್ನ ಕಣ್ಣಮುಂದೆ ಉರುಳಿ ಹೋ ಗಿವೆ ನಾನಾ ರಾಜ್ಯ ಸಾಮ್ರಾಜ್ಯಗಳು ಬಾಳಿದ್ದು ಬೆಳೆದದ್ದು ಅಳಿದದ್ದು ನಾನು ಕಂಡಿದ್ದೇನೆ ನಿನ್ನಂತಹ ಅಲ್ಪಜೀವಿಗಳದೆಷ್ಟು ಮಂದಿ ಆಗಿ ಹೋದರು ನಾನು ಕಂಡಂತೆ!! ಸಹಸ್ರಮುಖದ ಪರಮಾತ್ಮನನ್ನು ನಾನು ಕಂಡಿದ್ದೇನೆ ಮರೆತಿಲ್ಲ ನೀನೂ ಕಂಡಿರಬಹುದು ಮರೆತಿರಲೂ ಸಾಕು

ಸಹಸ್ರಶೀರ್ಷಾ ಪುರುಷ
ಸಹಸ್ರಾಕ್ಷ ಸಹಸ್ರಪಾದ

ಎಂದು ಯಾರನ್ನು ಕುರಿತು ಶ್ರುತಿ ಘೋಷಿಸುತ್ತಿದೆ ಆತ ನಿನ್ನಜತೆಯಲ್ಲೇ ಇದ್ದಾನೆ ನೋಡು ಪಾರ್ಥ ವೇದಪುರುಷ ಹೇಗೆ ಕಂಗೊಳಿಸುತ್ತಿದ್ದಾನೆ

ಅತಸೀ ಕುಸುಮಗಾತ್ರ ಕಮಲನೇತ್ರ ಅತುಲತುಲಸೀಮಾಲ ರಮಾಲೋಲ ಮಿರುಪಮಣ ಮಕುಟ ದೋರಣಿಸಿದಲಕಾವಳಿ ಸುಲಲಿತಭ್ರೂಲತೆ ಯಾವ ದೇವರಿಗುಂಟು ಇಂದ ಚೆಲುವು. ಶ್ಯಾಮ ಕೋಮಲ ಶರೀರ ನವರತ್ನ ಮಕುಟ ಕುಂಡಲ ಕೇಯೂರಹಾರ ಪ್ರಕಟಕಟಿ ಸೂತ್ರ ಮಣಿ ಮಂಜೀರ ಜಲಜ ಸಮಯುಗ ಚರಣ ಮೋಹನಾಕಾರ ಮಗು ಪಾರ್ಥ, ಈ ಮಹಾಪುರುಷನ ಕರುಣೆಗೆ ಪಾತ್ರನಾಗುವುದೇ ಮಾನವಜೀವನದ ಪರಮಗುರಿ ಆತ ಒಲಿಯುವುದು ಅಹಂಕಾರಕ್ಕಲ್ಲ ಅಧಿಕಾರಕ್ಕಲ್ಲ ಐಶ್ವರ್ಯಕ್ಕಲ್ಲ ಆತನ ಕರುಣೆಗೆ ಪಾತ್ರನಾದದ್ದೇ ನಿನ್ನ ಭಾಗ್ಯವೆಂದು ಭಾವಿಸದೆ ನೀನು ಅದೆಷ್ಟು ಗರ್ವದಿಂದ ಮಾತಾಡುತ್ತೀ ಮಗು ಕೋವಿದರ್ ಗರ್ವಮಂ ಮಾಡಲಾಗದು ಪಾರ್ಥ ನಿನ್ನ ಎಲ್ಲ ಸೌಭಾಗ್ಯಕ್ಕೂ ಕಾರಣನಾದ ಕರುಣಾಜಲಧಿಯ ಮುಂದೆ ನಿನ್ನ ಯೋಗ್ಯತೆ ಎಷ್ಟು ಸಾಗರದಲ್ಲಿ ಸಾಸಿವೆಯಷ್ಟೂ ಇಲ್ಲ ಎಂದು ಬಕದಾಲ್ಭ್ಯ ಕೈಮುಗಿದ ಶ್ರೀಹರಿಗೆ

ಹೇಳುತ್ತಿದ್ದ ಜೈಮಿನಿಯ ಕಂಠ ಭಕ್ತಿಗದ್ಗದವಾಯ್ತು

ಕೇಳುತ್ತಿದ್ದ ಜನಮೇಜಯನ ಕಣ್ಣಲ್ಲಿ ಆನಂದ ಬಾಷ್ಪ ಪ್ರವಹಿಸಿತು ✳

# ನಾಥದ್ವಾರ ಹಾಗೂ ಶ್ರೀನಾಥ್‌ಜಿ

---ಸಿ ಗೋವಿಂದಾಚಾರ್

ಎಲ್ಲ ಸಂತ ಮಹಾನುಭಾವರು ಶ್ರೀಕೃಷ್ಣನ ಮನ ಮೋಹಕ ಸೌಂದರ್ಯ ಹಾಗೂ ಲೀಲೆಗಳನ್ನು ಪ್ರದಾನ ಕದಾವಸ್ತುಗಳನ್ನಾಗಿ ಮಾಡಿಕೊಂಡು ಭಕ್ತಿ ಮಾರ್ಗದ ಪ್ರಸಾರವನ್ನು ಮಾಡಿ ಸಂತ ಶ್ರೇಷ್ಠ ರೆನಿಸಿ ಕೊಂಡಿದ್ದಾರೆ ಇಂತಹ ಸಂತ ರತ್ನಗಳ ಪೈಕಿ ೧೫ ನೆ ಶತಮಾನದ ವ್ರಜಪುರಿಯ ಶ್ರೇಷ್ಠ ಭಕ್ತ ಕವಿ ಶುದ್ಧಾ ದ್ವೈತ ಮತ ಹಾಗೂ ಪುಷ್ಟಿ ಮಾರ್ಗದ ಸ್ಥಾಪಕರಾದ ಆಂಧ್ರದ ವಲ್ಲಭಾಚಾರ್ಯರೂ ಒಬ್ಬರು ನಾದ ದ್ವಾರ ಕ್ಷೇತ್ರದ ಉಗಮಕ್ಕೆ ಇವರೆ ಕಾರಣ ಪುರು ಷರು

ಪುಷ್ಟಿ ಮಾರ್ಗದ (path of grace) ಪ್ರಕಾರ

೧ ಲೌಕಿಕ ಹಾಗೂ ಆದ್ಯಾತ್ಮಿಕ ವಿಷಯಗಳಲ್ಲಿ ಪ್ರಗತಿಗೆ ಮತ್ತು ಭಗವಂತನಲ್ಲಿ ಶರಣುಹೋಗಲು ಅವನ ಕೃಪೆಯೇ (ಪುಷ್ಟಿ) ಕಾರಣ

೨ ರಮಣೇಚ್ಛೆಯಿಂದ ಆನಂದಾದಿ ಗುಣಗ ಳನ್ನು ತಿರೋಧಾನ ಮಾಡಿಕೊಂಡು ಪರಬ್ರಹ್ಮನೇ ಜೀವರೂಪವನ್ನು ತಾಳುತ್ತಾನೆ ಶ್ರೀಕೃಷ್ಣನು ಅನಂತ ಶಕ್ತಿಯುತನಾಗಿ ನಿತ್ಯ ಲೀಲೆಯಲ್ಲಿ ಎಲ್ಲಿ ತೊಡಗು ವನೋ ಅದೇ ವೈಕುಂಠ ಗೋಲೋಕ ವೈಕುಂಠದ ಒಂದಂಶ ಶ್ರೀಕೃಷ್ಣ ಲೀಲಾಸ್ಥಳಗಳಲ್ಲೆಲ್ಲಾ ವೈಕುಂ ಠದ ವ್ಯಾಪ್ತಿ ಇದೆ

## ಗೋವರ್ಧನೋದ್ಧರಣ

'ಕೃಷ್ಣಂ ವಂದೇ ಜಗದ್ಗುರುಂ' ಎಂದು ಜಗತ್ತಿಗೆ ಅರಿವಾಗಿದ್ದು ಕೃಷ್ಣಲೀಲೆಗಳಿಂದಲೇ ಗೋವರ್ಧ ನೋದ್ಧರಣ ಅವನ ಒಂದು ಅಸಾದಾರಣವಾದ ಲೀಲೆ ಆದರೆ ಇದು ಎಂದೂ ಸಮಾಪ್ತಿಯಾದ ವಿಭವ ಲೀಲೆ ಕಾಲಾನುಕಾಲಕ್ಕೆ ಜಗನ್ನಾದಪುರಿ, ಮಥುರ, ದ್ವಾರಕ, ನಾಥದ್ವಾರ ಮುಂತಾದ ಲೀಲಾ ಸ್ಥಳಗಳಲ್ಲಿ ಶ್ರೀಕೃಷ್ಣನು ಅರ್ಚಾರೂಪದಲ್ಲಿ ಅದವ ಚಿತ್ರರೂಪದಲ್ಲಿ ಕಾಣಿಸಿಕೊಂಡು ತನ್ನ ವ್ಯಾಪಾರ ವನ್ನು ಮುಂದುವರೆಸಿದ ದಿವ್ಯತಾಣವಾದ ನಾದ ದ್ವಾರ ಪಂಚದ್ವಾರಕೆಗಳಲ್ಲಿ ಒಂದು ಗೋಮತಿ ದ್ವಾರಕ, ಬೀಟದ್ವಾರಕ ಹಾಗೂ ಕುಚೇಲ ಪಟ್ಟಣ ಇತರ ದ್ವಾರಕೆಗಳು ಪೂರ್ವ ಭಾರತದಲ್ಲಿ ಜಗ ನ್ನಾದಸಂಸ್ಕೃತಿ ಪ್ರದಾನವಾದರೆ ಪಶ್ಚಿಮದಲ್ಲಿ ಕನ್ಹ ಯ್ಯಸಂಸ್ಕೃತಿ ಪ್ರದಾನ ಶ್ರೀಕೃಷ್ಣನ ೭ ರೂಪಗಳು ರಾಜಾಸ್ಥಾನದ ೭ ಕ್ಷೇತ್ರಗಳಲ್ಲಿ ಕೇಂದ್ರೀಕೃತವಾಗಿದೆ ಇದರಲ್ಲಿ ನಾದದ್ವಾರದ ಶ್ರೀನಾದ್‌ಜಿ ಅದವ ನವ ನೀತ ಅದವ ಗುಹಾನಾದರೂಪ ಪ್ರದಾನವಾ ದುದು ಇದು ಗೋವರ್ಧನೋದ್ಧರಣದ ಪ್ರಾತಿ ನಿಧ್ಯವನ್ನು ಪ್ರತಿಬಿಂಬಿಸುವುದು ಇನ್ನುಳಿದ ಆರು ಕ್ಷೇತ್ರಗಳು ಯಾವುವೆಂದರೆ

ಕೋಟಾದಲ್ಲಿ 1 ಮದುರಾನಾದ, 2 ವಿಠಲ ನಾದ, ಜೈಪುರದಲ್ಲಿ 3 ಗೊ ಕುಲನಾದ, 4 ಮದ ನಮೋಹನ, 5 ಕಂಕ್ರೋಲಿಯ ದ್ವಾರಕಾನಾದ 6 ಸೂರತ್‌ನ ಯದುನಾದ

ನಾದದ್ವಾರ ಕ್ಷೇತ್ರವು ಉ ದ ಯ ಪು ರ ದಿಂ ದ ಸುಮಾರು ೪೦ ಮೈಲಿ ದೂರದಲ್ಲಿದೆ ಈ ಕ್ಷೇತ್ರವು ಪೂರ್ವಕ್ಕೆ ಬೆಟ್ಟದಸಾಲು, ಪಶ್ಚಿಮಕ್ಕೆ ಬಾಣನದಿ ಉತ್ತರದಕ್ಷಿಣಗಳಲ್ಲಿ ಹುಣಿಸೇ ಮರದ ತೋಪು ಏಪ್ಪಳ, ಹತ್ತಿ ಮರಗಳು, ಪಕ್ಷಿ ಹಾಗೂ ವನ್ಯದಾಮ ಮತ್ತು ಇನ್ನೂ ಸೊಗಸಾದ ಪರಿಸರದಿಂದ ಕೂಡಿದೆ

## ಯಮುನೆಯಿಂದ ಬಾಣನದಿಗೆ

ಮಥುರಾನಗರದ ಸುಮಾರು ೮೦ ಮೈಲಿ ಸುತ್ತ ಳತೆ ಉಳ್ಳ ಪ್ರದೇಶಕ್ಕೆ ವ್ರಜಭೂಮಿ ಎಂದು ಹೆಸರು ಶ್ರೀಕೃಷ್ಣನ ಅನಂತರ ಚಂದ್ರವಂಶದವರೇ ಇಲ್ಲಿ ಆಳುತ್ತಿದ್ದರು ಹಿಂದೂ ಮುಸ್ಲಿಮರ ಮೈತ್ರಿ ಹಾಗೂ ವಿರಸ ಭಾರತದ ಇತಿಹಾಸದಲ್ಲಿ ಮಾಮೂ ಲಾಗಿ ಆಗಿಂದಾಗ್ಗೆ ಬಂದಿರುವ ಪ್ರಸಂಗಗಳಾಗಿವೆ ಅಕ್ಬರ್, ಜಹಾಂಗೀರ್, ಶಹಜಹಾನ್, ದಾರಾ, ಶೂಜ ಮತ್ತು ಮುರಾದ್ ಇವರೆಲ್ಲರೂ ಭಾರ ತದ ಸುಸಂಸ್ಕೃತಿಯನ್ನು ಮೆಚ್ಚಿರುವುದಲ್ಲದೆ ಶ್ರೀಕೃ ಷ್ಣಪ್ರೇಮಿಗಳೂ ಆಗಿದ್ದರು ದೇವತಾಕಾರ್ಯಗ ಳಲ್ಲಿ ನೆರವಾಗಿದ್ದಾರೆ ಆದರೆ ತಂತ್ರಿಯಾದ ಔರಂಗ್‌ಜೇಬ್ ಇವರ ಚರಿತ್ರೆಗೆ ಮಸಿ ಬಳಿದಿ ದ್ದಾನೆ ದುರದೃಷ್ಟವಶಾತ್ ಹಿಂದೂ ಹಿಂದೂ ಗಳಲ್ಲೇ ಒಳಜಗಳ ಶೈವ ವೈಷ್ಣವರ ತಿಕ್ಕಾಟ ವಾಗುತ್ತಿರುವ ಸಂದರ್ಭವನ್ನು ಔರಂಗ್ ಜೇಬನು ದುರುಪಯೋಗಿಸಿಕೊಂಡು ವ್ರಜದೇಶಗಳಲ್ಲಿರುವ ಕ್ಷೇತ್ರಗಳನ್ನು ಲೂಟಿಮಾಡಲಾರಂಭಿಸಿದ ಮೆ ವಾ ಡದ ಹಿಂದೂ ಪತಿ ಮಹಾರಾಣ ರಾಜಸಿಂಹ ಇವನ ಮುನ್ನಡೆಯನ್ನು ತಡೆದ ಇದೇ ಸಂದ ರ್ಭದಲ್ಲಿ ಗುಹೆಯಲ್ಲಿ ಪೂಜಿಸಲ್ಪಡುತ್ತಿದ್ದ ಗೋವ ರ್ಧನ ಮೂರ್ತಿ (ಗುಹನಾದ) ಯನ್ನು ವಲ್ಲಭಾಚಾ ರ್ಯರು ರೆ ಷ್ಮೆ ವಸ್ತ್ರದಲ್ಲಿ ಸುತ್ತಿ, ಎತ್ತಿನ ಬಂಡಿಯ ಮೇಲೆ ಸಾಗಿಸಿಕೊಂಡು ಕೋಟಾ ರಾಮ ಪುರ ಮಾರ್ಗವಾಗಿ ರಾಜಾಸ್ಥಾನದ ಮೇವಾಡಕ್ಕೆ ಪ್ರಯಾಣ ಬೆಳಸಿದರು ಬಂಡಿಯು ದಿಲ್‌ವಾರ ತಾಲ್ಲೂಕಿನ ಸಿಯಾಡ್ ಗ್ರಾಮ ತಲುಪಿತು ಚಕ್ರ ಗಳು ಹೂತುಹೋದವು. ಆನೆಗಳ ನೆರವಿನಿಂದಲೂ ಬಂಡಿ ಕದಲಲಿಲ್ಲ ಮಹಾ ಸಂಕಲ್ಪ ಅರ್ದವಾ ಗಲು ಆಚಾರ್ಯರಿಗೆ ಹೆಚ್ಚು ಕಾಲ ಬೇಕಾಗಲಿಲ್ಲ ಕೂಡಲೇ ಪ್ರತಿಷ್ಠಾಪನ ಕಾರ್ಯವನ್ನೂ ಮತ್ತು ಸಣ್ಣ ಮಂದಿರವನ್ನು ನಿರ್ಮಾಣ ಮಾಡಿದರು ಸಿಯಾಡ್ ಗ್ರಾಮವೇ ನಾದದ್ವಾರವಾಯಿತು (the lord of threshold – portal of the God) ಯುದ್ಧಭೂಮಿಯನ್ನು ತೊರೆದು ಬಂದದ್ದರಿಂದ ದೇವರಿಗೆ 'ರಣ ಛೋಡ್‌ಜಿ ಎಂದೂ ಹೆಸರಿದೆ

ಶ್ರೀನಾದ್‌ಜಿ ಬಹುಮುದ್ದಾದ ಕಪ್ಪು ಶಿಲೆಯ ೭ ವರ್ಷದ ಬಾಲ ಮುಕುಂದ ಮೂರ್ತಿ ಗೋವರ್ಧ ನೋದ್ಧರಣ ಭಂಗಿಯಲ್ಲಿದೆ ಪಾದಗಳು ಪಕ್ಕಕ್ಕೆ ಸರಿದಿವೆ ಎತ್ತುಗಳು ಈ ಮೂರ್ತಿಯನ್ನು ಸುರ ಕ್ಷಿತವಾಗಿ ಸೇರಿಸಿದ್ದರಿಂದ ಸುಪ್ರಭಾತ ಸೇವೆಯಲ್ಲಿ ಎತ್ತುಗಳಿಗೂ ಪೂಜೆ ಉಂಟು ಅರ್ಚಕ ಸಮುದಾ ಯಕ್ಕೆ 'ಮುಖಿಯಾ' ಎಂದೂ ಪ್ರದಾನ ಪರಿಚಾರ ಕರಿಗೆ 'ಪಾನೇರಿ' ಎಂದೂ ಕರೆಯುವರು ಅರ್ಚ ಕರು ಬ್ರಹ್ಮಚಾರಿಗಳಾಗಿರಬಹುದು ಅದವ ಗೃಹ ಸ್ಥರಾಗಿರಬಹುದು ಆದರೆ ದ್ವಿತೀಯ ವಿವಾಹ ನಿಷಿದ್ಧ ಅರ್ಚಕ ಸಮುದಾಯದಲ್ಲಿ ವಲ್ಲಭಾ ಚಾರ್ಯರ ವಂಶ ವ್ಯಾಪಿಸಿರುವುದರಿಂದ ಅರ್ಚಕ ಕ್ಷೇಮಾಭಿವೃದ್ಧಿಗೆ ಸರ್ವರಿಂದಲೂ ಆದ್ಯತೆ ಇದೆ. ೭ ಕನ್ಹಯ್ಯ ಕ್ಷೇತ್ರಗಳನ್ನು ತಲಾ ಒಂದೊಂದರಂತೆ ವಲ್ಲಭಾಚಾರ್ಯರ ೭ ಪುತ್ರರ ಸ್ವಾಮಿತ್ವಕ್ಕೆ ಕೊಟ್ಟಿ ರುತ್ತೆ ಜೈಪುರದ ಮದನ ಮೋಹನ ಮಂದಿರ

ವಲ್ಲಿ ಅರ್ಚಕರು ಸ್ತ್ರೀಯರು ಈ ಎಲ್ಲ ಕ್ಷೇತ್ರಗಳಲ್ಲಿ ವಲ್ಲಭಸಂಪ್ರದಾಯ ಜೇಮು ಬಂದಿದೆ ದಿನಂ ದಿನ ಪೂಜಾಕಾರ್ಯದಲ್ಲಿ ಸುಮಾರು ಸಾವಿರ ಸೇವ ಕರು ನರವಾಗುವರು ವಲ್ಲಭಾಚಾರ್ಯರ ಅನು ಯಾಯಿಗಳಾದ ತಿಲಕ್ ಹಾಗೂ ಗೊಸಾಯಿ (ಅದವ ಗೊ ಸ್ವಾಮಿ) ಮನತನದವರೇ ಈ ನಿತ್ಯಸ ವಕರಾಗಿರುತ್ತಾರ ರಾದೆಯು ಕೃಷ್ಣನ ಪಾದಗಳನ್ನು ಒತ್ತುತ್ತಿರುವ ಅಲಂಕಾರ, ಚಕ್ಕುಲಿ ಕೊ ಡುಬಳೆ ತ ಂಗೋಳು ಮುಂತಾದ ತಿಂಡಿಗಳು, ಸಿಹಿತಿಂಡಿ ಗಳಲ್ಲಿ ಹಾಲು ಮೊ ದ (ಪೇಡ) ಮತ್ತು ಸಿಹಿ ಅದ ಲಕ್ಕಿ ಹಾಲು ಮತ್ತು ಪಾನ್ ಬಿ ಡ ದೇವರ ಮುಂದಿ ಡುವುದು ಪ್ರತಿರಾತ್ರಿಯ ಕಲಾಪಗಳು ನಂತರ ಜೂ ಗುಳ ಹಾಡುವರು ಸನ್ನಿದಿ ಮುಚ್ಚುವುದಕ್ಕೆ ಮುಂಚೆ ಪ್ರದಾನ ಅರ್ಚಕರು ಮೆ ಲ್ಭಾಗಕ್ಕೆ ಬಂದು 'ಪ್ರಾದ ಕಾಲ ಎಲ್ಲರೂ ಸಕಾಲಕ್ಕೆ ಬಂದು ಸೆ ವೆ ಆರಂ ಭಿಸ' ಎಂದು ಘೋಷಿಸಿ ಸನ್ನಿದಿಯನ್ನು ಮುಚ್ಚು ವರು

## ಸಿರಿತನ

ಪೂಜಾವಿದಿನಿಯಮಗಳನ್ನು ಅನೂಚಾನವಾಗಿ ಪಾಲಿಸುವ ಹಾಗೂ ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂಖ್ಯೆಯನ್ನು ನಿರ್ವಹಿಸುವ ಸಮುದ್ದೇಶ ದಿಂದ ಪ್ರತಿದಿನ ೬ ಸಲ ದರ್ಶನಕ್ಕೆ ಅವಕಾಶ ಮಾಡಿಕೊಡಲಾಗಿದ ತಿರುಪತಿಯನ್ನು ಬಿಟ್ಟರೆ ನಾದದ್ವಾರ ಭಾರತದಲ್ಲಿ ದ್ವಿತಿ ಯ ಸಿರಿವಂತಕ್ಷೇತ್ರ ಎಂದು ಶ್ರೀ ಕೆ ಆರ್ ವೈದನಾದನ್ ತಮ್ಮ 'ಶ್ರೀಕೃಷ್ಣ ದಿ ಲಾರ್ಡ್ ಆಫ್ ಗುರುವಾಯೂರ್' ಎಂಬ ಕೃತಿಯಲ್ಲಿ ಅಬಿಪ್ರಾಯಪಟ್ಟಿದ್ದಾರೆ 'ದಿ ಅನಾಲ್ಸ್ ಅಂಡ್ ಆನ್ಟಿಕ್ಟಿಟೀಸ್ ಆಫ್ ರಾಜಾ ಸ್ಥಾನ್ ಎಂಬ ಅಮೂಲ್ಯ ಕೃತಿಯಲ್ಲಿ ದಿ ಕರ್ನಲ್ ಜೇಮ್ಸ್ ಟಾಡ್ ರವರು ಹಲವಾರು ಕಾರಣಗಳನ್ನು ಕೊಟ್ಟು ನಾದದ್ವಾರದ ಶ್ರೀಮಂತಿಕೆಯನ್ನು ಎತ್ತಿಹಿಡಿ ದಿದಾರ

೧ ಸಂಕಲ್ಪಾನುಸಾರವಾಗಿ ಶ್ರೀಕೃಷ್ಣನೇ ವ್ರಜ ಭೂಮಿಯಿಂದ ನಾದದ್ವಾರಕ್ಕೆ ಬಂದು ನೆಲಸಿದಾನೆ ಎಂದು ಭಾವಿಸಿ ಸುತ್ತಮುತ್ತಲಿರುವ ಸಹಸ್ರಾರು ಭಕ್ತರು ದಾನ್ಯ ಹಣ ತರಕಾರಿ, ಆಭರಣಗಳು, ಭೂಮಿ ಮುಂತಾದುವುಗಳನ್ನು ಸಮರ್ಪಿಸಿ ತಾವೂ ಕೃತಾರ್ಥರಾಗುತ್ತಿದ್ದರು ಕ್ರಮೇಣ ನಾದದ್ವಾರ ಪಟ್ಟಣ ವಾಗಿ ಮಾರ್ಪಾಡಾಯಿತು ಕಾಶ್ಮೀರದಿಂದ ಶಾಲು, ಗುಜರಾತಿನಿಂದ ಪ್ರಿಂಟೆಡ್ ವಸ್ತ್ರಗಳು, ಬಂಗಾಳ ಮತ್ತು ಕಾಶಿಯಿಂದ ರೇಷ್ಮೆವಸ್ತ್ರಗಳು, ಮದುರಾನಗ ರದಿಂದ ಪೇಡ ಸಿಹಿತಿಂಡಿಗಳು ಮೇಲಿಂದ ಮೇಲೆ ಬರಲಾರಂಭಿಸಿದವು

೨ ಶ್ರೀ ನಾದ್‌ಜಿ ಮುಸ್ಲಿಮರಿಗೂ ನೆಚ್ಚಿನ ದೈವ ಮುಲ್ತಾನಿ ಹಾಗೂ ಕಾರವಾನ್ ವಣಿ ಕರು ತಮ್ಮ ಪ್ರಯಾಣವನ್ನು ಮೊದಲುಗೊಳಿಸಿ ನಾದ ದ್ವಾರವನ್ನು ಸೇವಿಸಿ ಕಾಣಿಕೆಗಳನ್ನು ಸಮರ್ಪಿಸುತ್ತಿ ದ್ದರು ಮೋಕಾ, ಮಸ್ಕಾಟ್ ಮತ್ತು ಜಿದ್ದಾಗಳ ಲ್ಲಿದ ಭಾರತೀಯ ಭಕ್ತವೃಂದದಿಂದ ಸಾಲಿಯಾನ ೧೦೦೦೦ ರೂಪಾಯಿಗಳು ಸಂದಾಯವಾಗುತ್ತಿತ್ತು ನಾದದ್ವಾರದ ವೈಷ್ಣವ ಭಕ್ತರು ವಿದೇಶಿ ಸರಕುಗ ಳನ್ನು ಆಮದು ಮಾಡಿಕೊಂಡರ ಅವಕ್ಕೆ ಸಂಪೂರ್ಣ ಸೀಮಾಶುಲ್ಕ ವಿನಾಯಿತಿ ದೊರೆಯುತ್ತಿತ್ತು ಆದರೆ ಶ್ರೀನಾದನ ಭಂಡಾರ ತುಂಬುತ್ತಿದ್ದುದು ರಾಜಾಸ್ಥಾ ನದ ಮಾರವಾಡಿ ಹಾಗೂ ರಜಪೂತ ವ್ಯಾಪಾರಸ್ಥ ರಿಂದ ಅಲ್ಲಲ್ಲಿದ್ದ ಶೈವ ಶಾಕ್ತ ಕ್ಷೇತ್ರಗಳ ವರಮಾನವು ಇಳಿಮುಖವಾಗಿ ಅವೆಲ್ಲಾ ಇಲ್ಲಿಗೇ ಪ್ರವಹಿಸಿತು

೩ ರಣಛೋಡ್‌ಜಿ ಪ್ರಸಂಗದಿಂದ ರಾಜಾಸ್ಥಾ ನದ ರಾಜ ಮನತನದಲ್ಲಿ ಭಾರಿ ಬದಲಾವಣೆ ಉಂಟಾಯಿತು ೭ ಕ್ಷೇತ್ರಗಳ ಮೇಕಿ ಸಂಸ್ಥಾನಕ್ಕೆ ಸಮೀಪದಿರುವ ಕನ್ಹಯ್ಯನನ್ನು ರಾಣಗಳು ತಮ್ಮ ಕುಲದವನ್ನಾಗಿ ಮಾಡಿಕೊಂಡರು ಜಲಂದರ ದಿಂದ ಬಂದ ಗುಹನಾಥ ಮೇವಾಡದ ರಾಣಾಗಳ ದೈವ ಕೆಲವು ಶೈವ ರಾಣಗಳು ವೈಷ್ಣವರಾದವರು ಸಿಯಾಡ್ ಗ್ರಾಮ ಅಂದು ಎರಡನ ಮಹಾರಾಣ ಜಗತ್‌ಸಿಂಹನ ಅದೀನದಲ್ಲಿತ್ತು ಬಿಕನೀರ್, ಕಿಶನ್ ಗಢ, ಕೋರ, ಬುಂದಿ ಹಾಗೂ ಜಯಪುರದ ಮಹಾ ರಾಣರು ಬೊಕ್ಕಸದಿಂದ ಸ್ವಲ್ಪ ಪಾಲನ್ನು ನಾದ ದ್ವಾರಕ್ಕೆ ಅನುದಾನವಾಗಿ (grants) ಕೊಡುತ್ತಿ ದ್ದರು ಇದಕ್ಕ ತಕ್ಕಂದಾ ರಾಜ್ಯಾದೇಶವನ್ನು ಹೊರ

ಡಿಸಲಾಗಿತ್ತು ಈ ಅನುದಾನವನ್ನು ವೈಷ್ಣವ, ೧ರ ಹಾಗೂ ಅರ್ಚಕ ಸಮುದಾಯಿಕೆ ಬಾಗವಾಡುತ್ತಿದ್ದರು ಇದಲ್ಲದ ಅರ್ಚಕರಿಗೆ ಶಾಯಿ ಬಟ್ಟೆ ಹಾಗೂ ಸಂಚಾರಕ್ಕಂದು ಕುದುರೆಗಳನ್ನು ಕೊಡುತ್ತಿದ್ದರು ಗಂಡು ಸಂತತಿಯಾದರೆ ೭ ಕ್ಕೆ ತಗಾ ದೇವರ ಪೈಕಿ ತಮಗಿಷ್ಟವಾದ ಹೆಸರನ್ನಿಡುತ್ತಿದ್ದರು ರಾಜಕುಮಾರರ ಪಟ್ಟಾಭಿಷೇಕವಾದ ನಂತರ ಶ್ರೀನಾಥ್‌ಜಿಗೆ ಸ್ವರ್ಣತೂಡ ಹಾಗೂ ಮುತ್ತು ಪಚ್ಚೆ ಮತ್ತು ಕೆಂಪು ಹರಳಿನ ಕಂಠೀಹಾರ (ಕಂಠಬಂದನ) ವನ್ನು ಸಮರ್ಪಿಸುತ್ತಿದರು ಆಭರಣಗಳ ಪೈಕಿ ಇವೇ ಹೆಚ್ಚಿನ ಸಂಖ್ಯೆಯಲ್ಲಿರುವುದು ಈ ಆಬರಣಗಳು ದೇವರ ಮುಡಿಯಿಂದ ಅಡಿಯವರೆಗೂ ವಾಲವೆ ಸರ್ವಕಾಲಗಳಲ್ಲಿ ಈ ಆಬರಣಗಳು ದೇವರ ಮೇಲಿರುತ್ತದೆ ಆದ್ದರಿಂದ ಗೋವರ್ಧನೇಶ ಶ್ರೀನಾದ್‌ಜಿ ಆದ (Lord of Wealth)

ನಾದದ್ವಾರ ಹಸರಿನಲ್ಲಿ ಒಟ್ಟು ೪೩ ವಿದವಾದ ಆಸ್ತಿಗಳಿವೆ ಇದರಲ್ಲಿ ಕೃಷಿಬೂಮಿ ಪಕ್ಷಿ ಹಾಗೂ ಅರಣ್ಯದಾಮಗಳು ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಶ್ರೀನಾಥ್‌ಜಿ ಮಂದಿರ ಹವೇಲಿ ಸೇರಿವೆ ದಕ್ಷಿಣ ದಿವ್ಯಕ್ಷೇತ್ರಗಳಂತೆ ಇಲ್ಲಿ ರಾಜಗೋಪುರ ಪ್ರಾಕಾರ ಅದವ ವಿಮಾನಗಳಿರುವುದಿಲ್ಲ ನೂರಾರು ಕೊರಡಿ ಹಜಾರಗಳುಳ್ಳ ದೊಡ್ಡ ಬಂಗಲೆಯಂತಿರುವ ಮಂದಿರ್ ಹವೇಲಿ ವ್ಯಾಪಾರ ಸಮುದಾಯ ಹಾಗೂ ಮಹಾರಾಣಾಗಳ ಅಮೂಲ್ಯ ಕೊಡುಗೆ

## ಉತ್ಸವಗಳು

ನಾದದ್ವಾರದಲ್ಲಿ ಪ್ರತಿವರ್ಷ ಒಟ್ಟು ೨೫ ಉತ್ಸವಗಳು ಜರುಗುವುದು ಇವುಗಳಲ್ಲಿ ಅನ್ನಕೂಟ ಮಹೋತ್ಸವ ಪ್ರದಾನವಾದ್ದು ಇದನ್ನು ಆರಂಭಿಸಿದವರು ವಲ್ಲಭಾಚಾರ್ಯರು ಪುಷ್ಟಿ ಮಾರ್ಗದ ಉತ್ಸವವೆಂದೂ ಕರೆಯುವರು ಇದು ಕಾರ್ತಿಕ ಶುಕ್ಲ ಬಿದಿಗೆಯಂದು ಜರುಗುವುದು ಇದೆ ದಿನ ವ್ರಜ ದೇಶದಲ್ಲಿ ಗೋವರ್ಧನೋದ್ಧರಣ ವಾಗಿದ್ದು ದಕ್ಷಿಣದ ನಾಂಗೂರಿನ ೧೨ ದಿವ್ಯದೇಶಗಳ ಉತ್ಸವರು ತೈ ಅಮಾವಾಸ್ಯೆಯಂದು ಮಣಿಮಾಡಕೋವಿಲ್‌ನಲ್ಲಿ ಕೂಡುವಂತೆ ಇಲ್ಲಿಯೂ ಉಳಿದ ಆರು ಕ್ಷೇತ್ರದ ಕೃಷ್ಣಮೂರ್ತಿಗಳನ್ನು ವಲ್ಲಭಾಚಾರ್ಯರ ವಂಶದವರು ತರುವರು ಉತ್ಸವದಲ್ಲಿ ರಾಜಮನೆತನದವರೂ ಭಾಗವಹಿಸುವರು ಮೈಸೂರಿನ ಜಂಬೂ ಸವಾರಿಯಂತೆ ಭಾರಿ ಮೆರವಣಿಗೆ, ಕುದುರೆಗಳ ಓಟ, ಆನೆಗಳ ಕಾದಾಟ, ಅನ್ನಸಂತರ್ಪಣೆ, ಬಾಣ, ಬಿರುಸು ಪಟಾಕಿ ಇತರ ತಮಾಷೆ ಕಾರ್ಯಕ್ರಮಗಳು ಸಡಗರ ಸಂಭ್ರಮದಿಂದ ಜರುಗುವುದು

ಯಮುನಾ ತ್ರವದಂದು ಯಮುನಾ ದರ್ಶನವನ್ನು ತಂದು ಕೊಳವನ್ನು ಸೃಷ್ಟಿಸಿ ಕಾಗದದ ದೋಣಿಗಳನ್ನು ಅದರಲ್ಲಿ ಬಿಟ್ಟು ಶ್ರೀ ಕೃಷ್ಣ ಯಮುನೆಯಲ್ಲಿ ಆಟವಾಡಿದಂತೆ ತೋರಿಸುವರು ಈ ಸೇವೆಯನ್ನು ಗೋವರ್ಧನ್‌ಲಾಲ್‌ಜಿ ಎಂಬ ತಿಲಕ್ ಮನೆತನಕ್ಕೆ ಸೇರಿದವನು ಆರಂಬಿಸಿದ ಶ್ರೀಕೃಷ್ಣ ನವಿಲು ಹಿಡಿಯುವ ಸಾಹಸ ಬಗೀಚ್‌ಕ ಉತ್ಸವ ಮಾದ ಫಾಲ್ಗುಣ ಮಾಸದಲ್ಲಿ ವಸಂತ ಪಂಚಮಿ, ಹೋಲಿ ಹಬ್ಬದಂದು ರಂಗ್ ಹೋಲಿ ಕ್ರೀಡೆ ಚಿತ್ತರಂಜಕವಾಗಿರುವುದು ರಾಮಾಷ್ಟಮಿ ಪವಿತ್ರ ಏಕಾದಶಿ ವಾಮನ ದ್ವಾದಶಿ, ಶರತ್ ಪೂರ್ಣಿಮ, ಶ್ರೀನಾದ್ ಪಾಟೋತ್ಸವ್ ರಾಸಲೀಲ, ಸಾವನ್‌ಜೂಲ (ಉಯ್ಯಾಲೋತ್ಸವ) ಸ್ನಾನಯಾತ್ರ ಮತ್ತು ರದ್‌ಯಾತ್ರ ಇತರ ದೈವವೋತ್ಸವಗಳಾಗಿವೆ

## ಪಿಚ್ಚಾಯಿಕಲೆ

ರಂಗು ರಂಗಿನ ವಿಶೇಷ ಚಿತ್ರವಿನ್ಯಾಸಗಳಿರುವ ವಸ್ತ್ರಕ್ಕೆ ಪಿಚ್ಚಾಯಿ ಎಂದು ಹೆಸರು ಇದನ್ನು ಆರಂಭಿಸಿದವರು ಆದಿಗೌಡಿಯ ಹಾಗೂ ಜಾಂಗೀಡ್ ಮನೆತನದವರು ೧೬ ೧೭ ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಪಹಾಡಿ ಕಲೆಯೊಂದಿಗೆ ಪಿಚ್ಚಾಯಿ ಕಲೆಯೂ ಸೇರಿ ರಾಜಾಸ್ತಾನಿ ಶೈಲಿಯ ಕಲೆ ಇನ್ನಷ್ಟು ಪ್ರಗತಿ ಹೊಂದಿತು ಗೋಡೆ ಚಿತ್ರಗಳು ಹಾಗೂ ಸೂಕ್ಷ್ಮಕಲಾಕೃತಿಗಳು ರಾಜಾಸ್ಥಾನದ ಅಮೂಲ್ಯಕೊಡುಗೆ

೨೫ ಉತ್ಸವಗಳಲ್ಲಿ ಪಿಚ್ಚಾಯಿ ಚಿತ್ರೋತ್ಸವವೂ ಒಂದು ಮಸ್ಲಿನ್, ರೇಷ್ಮೆ ಹಾಗೂ ಅರಳೆ ವಸ್ತ್ರಗಳ ಮೇಲೆ ಶ್ರೀ ಕೃಷ್ಣ ಲೀಲೆಗಳನ್ನು ಸೂಚಿಸುವ ದೊಡ್ಡ ಹಾಗೂ ಸಣ್ಣ ಚಿತ್ರಗಳನ್ನು ಬರೆದು ಆಯಾಯ ಉತ್ಸವಗಳಿಗೆ ತಕ್ಕಂತೆ ಉಪಯೋಗಿಸುವರು ಉದಾ (a) ಅನ್ನ ಕೂಟೋತ್ಸವದಂದು ಗೋಪಾಲ ಮತ್ತು ವಿಶೇಷವಾಗಿ ಅವನ ಅಭಯ ಹಸ್ತಮುದ್ರಣವಿರುವ ಪಿಚ್ಚಾಯಿಯನ್ನೂ, ಜನ್ಮಾಷ್ಟಮಿಯಂದು ಕೃಷ್ಣಾವತಾರ ಚಿತ್ರಗಳಿರುವ ಕೆಂಪು ಪಿಚ್ಚಾಯಿಯನ್ನೂ, ನವಿಲು ವಿನ್ಯಾಸದ ಹಸಿರು ವಸ್ತ್ರವನ್ನು ಬಗೀಚ್‌ಕ ಉತ್ಸವದಂದು ಅಲಂಕಾರವಾಗಿ ಉಡಿಸುವರು ಅದವ ಹಿನ್ನೆಲೆಯಾಗಿ ಅಲಂಕರಿಸುವರು ಬುಟ್ಟಾಜರಿ, ಸ್ವರ್ಣ ಹಾಗೂ ಪೀತಾಂಬರದ ಅಂಚಿನ ಸ್ಯಾಟಿನ್ ಮಸ್ಲಿನ್ ಹಾಗೂ ವೆಲ್ವೆಟ್‌ನ 'ದಾಗ್ಲ' ಎಂಬುದನ್ನು ಬೇಸಿಗೆ, ಛಳಿಗಾಲದ ಸಂದರ್ಭಕ್ಕೆ ಅನುಗುಣವಾಗಿ ಧರಿಸುವರು ಮುತ್ತುರತ್ನಗಳ ಕಸೂತಿ ಕಲಸವಿರುವ ಚಿನ್ನದ ಕಟ್ಟುಳ್ಳ ಪಿಚ್ಚಾಯಿನ್ನು ದೀಪಾವಳಿ, ರದ ಸಪ್ತಮಿಯಂದು ಉಪಯೋಗಿಸುವರು ಬಾರಿ ಪಾರ್ಶ್ವಸ್ಥ ಅಮೃತ್ ಅಂಬಾಲಾಲ್ ಎಂಬ ಭಕ್ತನು ಇಂದಾ ಅಮೂಲ್ಯ ಆಭರಣಗಳನ್ನು ಜಪಾನಿಯಿಂದ ತರಿಸುತ್ತಿದ್ದ ದೊಡ್ಡಮಟ್ಟದ ಪಿಚ್ಚಾಯಿ ತಯಾರಿಕೆಗೆ ೩ ತಿಂಗಳು ಬೇಕಾಗುವುದು ದೇವರ ಹಿಂಭಾಗ ಹಾಗೂ ಅಕ್ಕಪಕ್ಕಗಳಲ್ಲಿ ಇದನ್ನು ಹಾಕುವರು ಎಲ್ಲಾ ಚಿತ್ರಗಳನ್ನು ಗೋಡೆಯ ಮೇಲೂ ನೋಡಬಹುದು ಇದರಲ್ಲಿ ಗೋ ದೂಳಿ ಮೇಳದ ಚಿತ್ರ, ಕಂಸ ಚಾಣೂರಮಲ್ಲ, ಶಕಟಾಸುರವದೆ ಚಿತ್ರಗಳು ಗಮನಾರ್ಹವಾದುದು

ಸರಿಯಾದ ವರ್ಣ ಸಂಯೋಜನೆಯೆ ಈ ಕಲೆಯ ಖ್ಯಾತಿಯ ರಹಸ್ಯ ಗೋವುಗಳಿಗೆ ಯಥೇಚ್ಛವಾಗಿ ಹಳದಿ ಪುಷ್ಪಗಳನ್ನು ತಿನ್ನಿಸಿ, ಅದರಿಂದ ಬರುವ ಗೋಮೂತ್ರವನ್ನು ಸಂಸ್ಕರಣಮಾಡಿ ಸ್ವಾಭಾವಿಕ ಹಳದಿ ಬಣ್ಣ ತಯಾರಾದದು ತಿಪ್ಪೆ ಟಿಯಲ್ಲಿ ಸಿಗುವ ಬಣ್ಣಗಳನ್ನು ಜೊತ ಜೊತೆಯಲ್ಲಿ ಬಳಸುವರು ಸುಮಾರು ೭೦೦ ಪಿಚ್ಚಾಯಿ ಕಲೆಗಾರರು 'ಚಿತ್ರಕಾರ್'ಗಲ್ಲಿಯಲ್ಲಿ ವಾಸವಾಗಿರುತ್ತಾರೆ ಇವರುಗಳ ಪೈಕಿ ಮುಸ್ಲಿಮರು ಸೇರಿ ೧೦೦ ಉತ್ತಮ ಕಲೆಗಾರರು ಶ್ರೀನಾದ ಮಂದಿರಕ್ಕೆಂದೇ ಮೀಸಲಾಗಿ ಸೇವೆಸಲ್ಲಿಸುತ್ತಿದ್ದಾರೆ 'ಭಗವಂತನ ಸೇವೆ ಮಾಡಿ ನಮ್ಮ ಗೌರವಪೂರಕವಾದ ಭಕ್ತಿಯನ್ನು ತೋರಿಸಲು ಇದೊಂದು ಅಪೂರ್ವ ಅವಕಾಶ' ಎಂದು ಅವರು ಹೇಳುವರು ಮಿಕ್ಕ ಕಲಾಕಾರರಿಗೆ ಜೈಪುರ, ಉದಯಪುರ ಹಾಗೂ ವಿದೇಶಿಯರೆ ಜಿ ವನಾದಾರ ಮನೆಗಳಲ್ಲಿ ಗೋಡೆ ಅಲಂಕಾರಕಾಗಿ ಸಣ್ಣ ಪಿಚ್ಚಾಯಿ ವಸ್ತ್ರಗಳಿಗೆ ಒಳ್ಳೆ ಬೇಡಿಕೆ ಇದೆ ವಿದೇಶಿಯರಿಗೆ ನಾದದ್ವಾರದಲ್ಲಿ ಪ್ರವೇಶ ದದಿಲ್ಲ ೧೯೬೦ರಲ್ಲಿ ಪ್ರಥಮಬಾರಿಗೆ ನಾದದ್ವಾರದ ಶ್ರೀ ನಾದ್ ಮಂದಿರದಲ್ಲಿ ಪರಿಜನ ಪ್ರವೇಶವಾಗಿ ಚರಿತ್ರೆಯಲ್ಲಿ ದಾಖಲಾಯಿತು

ಗಾಳಿಬೆಳಕಿನ ಸವೆತದಿಂದ ರಕ್ಷಿಸಲು ಹಿಂದಿನಿಂದಲೂ ಶರ್ಮ ಮನೆತನದವರು ಗೋಡೆ ಹಾಗೂ ಪಿಚ್ಚಾಯಿ ಚಿತ್ರಗಳನ್ನು ಕಾಪಾಡಿಕೊಂಡು ಬಂದಿರುತ್ತಾರೆ ದೆವ್‌ಗಢ, ಮೇವಾಡ, ಕೋಟ, ಕಿಶಾನ್‌ಗಢ ಹಾಗೂ ದೆಹಲಿಯ ಎಂ ಸಿ ಚಿತ್ರಶಾಲೆಗಳಲ್ಲಿ ಈ ಅಮೂಲ್ಯ ಚಿತ್ರಗಳ ಸಂಗ್ರಹಣೆ ಇದೆ ಜೈಪುರದಲ್ಲಿ ಅಮೃತ್ ಅಂಬಾಲಾಲ್ ಸ್ಥಾಪಿಸಿರುವ ರಾಜಾಸ್ತಾನಿ ಚಿತ್ರಕಲಾಶಾಲೆಯೂ ಇದೆ

ಶ್ರೀನಾದ್‌ಕೆ ಜೈ—

*

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ ತಿ ದೇ ಪ್ರಕಟಣೆಗಳಾದ ಪುಸ್ತಕಗಳು ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್
* ಯಾತ್ರಿಕರ ವಸ್ತುಗಳು ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೭ ೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦ ೩೦ ರಿಂದ ೧ ೦೦ ಗಂಟೆಯವರೆಗೆ ಕೆಲಸಮಾಡುತ್ತದೆ

# ಮೋಕ್ಷದ ಮೂರು ಮಾರ್ಗಗಳು

--ಕೆ ಜಗನ್ನಾದಶಾಸ್ತ್ರಿ

ಮೋಕ್ಷ, ಮುಕ್ತಿ, ಕೈವಲ್ಯ ಇವು ಸಮಾನಾರ್ಥಕ ಪದಗಳು ಮಾನವ ಈ ಮೋಕ್ಷವನ್ನು ಏಕೆ ಬಯಸುತ್ತಾನೆ? ಈ ಪ್ರಶ್ನೆಗೆ ವೇದಕಾಲೀನ ಋಷಿಗಳು ಉತ್ತರ ಹುಡುಕುತ್ತಾ "ಮುಕ್ತಿ, ಎಂದರೆ ಹುಟ್ಟು ಸಾವುಗಳಿಂದ ಬಿಡುಗಡೆ ಹೊಂದುವುದು ಮಾನವ ಭಗವಂತನಿಂದ ಸೃಷ್ಟಿಸಲ್ಪಟ್ಟವನು ತಾನು ಹುಟ್ಟಿ ಬಂದ ಸ್ಥಳಕ್ಕೆ ಮತ್ತೆ ಹೋಗಿ ಸೇರಬೇಕೆಂಬ ಆಕಾಂಕ್ಷೆಯೇ, ಅವನಲ್ಲಿ ಮೋಕ್ಷವನ್ನು ಪಡೆಯಬೇಕೆಂಬ ಆಸೆ ಹುಟ್ಟಲು ಕಾರಣವಾಗಿದೆ" ಎಂದು ಅರಿತರು ಅವರು, ಅನಂತರ, ಈ ದೃಷ್ಟಿಯಿಂದ ಚಿಂತನೆ ಮಾಡಿ, ಮೂರು ಮಾರ್ಗಗಳನ್ನು ತೋರಿಸಿಕೊಟ್ಟರು ಕರ್ಮಮಾರ್ಗ, ಜ್ಞಾನಮಾರ್ಗ ಮತ್ತು ಭಕ್ತಿಮಾರ್ಗ ಇವೇ ಅವರು ತೋರಿಸಿಕೊಟ್ಟ ಮೂರು ಮಾರ್ಗಗಳು

## ಕರ್ಮಮಾರ್ಗ

ಇದನ್ನು ಕರ್ಮಕಾಂಡ ಎಂದೂ ಕರೆಯುತ್ತಾರೆ ಯಜ್ಞಯಾಗಗಳು ಕರ್ಮಕಾಂಡದ ಪ್ರದಾನಕಾರ್ಯಗಳು ಮಾನವ ಮುಕ್ತಿಯನ್ನು ಪಡೆಯಬೇಕಾದರೆ ಇಂದ್ರಾದಿ ದೇವತೆಗಳನ್ನು ತೃಪ್ತಿಪಡಿಸಬೇಕು ಇವರ ಕೃಪೆಯಿಂದ ಮುಕ್ತಿಯನ್ನು ಸಂಪಾದಿಸಿ, ಅವರ ಪ್ರದಾನ ಲೋಕವಾದ ಸ್ವರ್ಗವನ್ನು ಪಡೆಯಬೇಕು ಇದೇ ಕರ್ಮಕಾಂಡದ ಮುಖ್ಯ ಉಪದೇಶ ವೇದ ಕಾಲೀನ ಕರ್ಮಮಾರ್ಗದ ಎಲ್ಲ ಮಂತ್ರಗಳೂ ಪ್ರಾರ್ಥನೆಗಳೂ ಈ ಹಿನ್ನೆಲೆಯಿಂದಲೇ ರಚಿತಗೊಂಡಿವೆ ವೈದಿಕ ಕರ್ಮಗಳನ್ನು ಮಾಡುವುದರಿಂದಲೂ, ಚಾತುರ್ವರ್ಣದವರು ತಮ್ಮ ವರ್ಣದರ್ಮವನ್ನು ಆಚರಿಸುವುದರಿಂದಲೂ, ಚತುರಾಶ್ರಮದವರು ಆಯಾ ಆಶ್ರಮದ ಕರ್ತವ್ಯಗಳನ್ನು ಪೂರೈಸುವುದರಿಂದಲೂ, ಮುಕ್ತಿಯನ್ನು ಪಡೆಯಬಹುದು ಎಂದು ಈ ಕರ್ಮಕಾಂಡ ಪ್ರತಿಪಾದಿಸುತ್ತದೆ ಇಲ್ಲಿ, ಕೇವಲ ಮಾನವಕ್ರಿಯೆಗೆ ಪ್ರಧಾನತೆಯೇ ಹೊರತು, ಅವನ ಮಾನಸಿಕ ಪ್ರವೃತ್ತಿಗೆ, ಚಿಂತನೆಗೆ, ಶಕ್ತಿಗೆ ಯಾವ ಸ್ಥಾನವೂ ಇಲ್ಲದಿರುವುದು ಮತ್ತು ಆ ದಿಶೆಯಲ್ಲಿ ಪ್ರಯತ್ನ ನಡೆಯದಿರುವುದೂ ಕಂಡುಬರುತ್ತದೆ

ಕರ್ಮಕಾಂಡದಲ್ಲಿ, ಮೇಲಿನ ಕೊರತೆ ಕಂಡುಬಂದರೂ, ಅಲ್ಲಿ ಪ್ರತಿಪಾದಿತವಾಗಿರುವ ಯಜ್ಞಯಾಗಗಳ ವಿಚಾರಗಳು ನಿಷ್ಪ್ರಯೋಜಕವಾದುವು ಎಂದು ಹೇಳುವಂತಿಲ್ಲ ಯಜ್ಞಯಾಗಗಳ ಆಚರಣೆಗಳ ಉದ್ದೇಶ, ಮಾನವನ ಕಷ್ಟವನ್ನು ಪರಿಹಾರ ಮಾಡಬೇಕು ಎಂಬುದೇ ಅಲ್ಲದೆ, ಅವನಲ್ಲಿ ಮಾನವಾತೀತ ದೈವೀ ಶಕ್ತಿಗಳ ಬಗ್ಗೆ ಶ್ರದ್ಧೆ ಮೂಡಿಸುವ, ಸಾಂಘಿಕ ಸಂಘಟನೆಯ ಮೂಲಕ ವ್ಯಕ್ತಿ, ಸಮಾಜ, ಗ್ರಾಮ ಮುಂತಾದುವುಗಳ ಹಿತ ಚಿಂತನೆ ಹಾಗೂ ಹಿತಸಾಧನೆ ಮಾಡುವ ಗುರಿಯಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ

ಕೇವಲ ಮಾನವನ ಮುಕ್ತಿ ಸಾದನೆಗಾಗಿ ಪ್ರಾರಂಭಿಸಲ್ಪಟ್ಟ ಈ ಯಜ್ಞಯಾಗಗಳ ಉದ್ದೇಶ, ಬರಬರುತ್ತಾ ವಿಶಾಲಗೊಂಡು, ಸುತ್ತಲ ಪರಿಸರದ ಪಶುಪಕ್ಷಿಗಳ, ಸಸ್ಯವರ್ಗಗಳ ರಕ್ಷಣೆ ಮತ್ತು ಪಾಲನೆಯ ಗುರಿಯನ್ನು ಸಾಧಿಸಲೂ ಪ್ರಯತ್ನಶೀಲವಾಯಿತು ಎನ್ನುವುದು ಗಮನೀಯ ವಿಚಾರವಾಗಿದೆ

ಯಜ್ಞಗಳನ್ನು ನಿತ್ಯಯಜ್ಞಗಳು ಮತ್ತು ಕಾಮ್ಯಕ ಯಜ್ಞಗಳು ಎಂದು ಎರಡು ಭಾಗಮಾಡಿ, ಅಗ್ನಿಹೋತ್ರ, ದರ್ಶಪೂರ್ಣಿಮಾಸ್ಯ ಮುಂತಾದುವುಗಳನ್ನು ನಿತ್ಯಯಜ್ಞಗಳೆಂದು ಕರೆದಿದ್ದಾರೆ ಈ ನಿತ್ಯ ಯಜ್ಞಗಳು ವ್ಯಕ್ತಿಗತವಾದ ಅದವಾ ಕೌಟುಂಬಿಕದ ಹಿತವನ್ನು ರಕ್ಷಿಸುವ ಸ್ವರೂಪದ್ದಾಗಿವೆ ಸೋಮಯಾಗ, ಸೌತ್ರಾಯಣಿ ಮುಂತಾದುವನ್ನು ಕಾಮ್ಯ ಯಜ್ಞಗಳು ಎಂದು ಕರೆದಿದ್ದಾರೆ ಇವು ಸಾಮಾಜಿಕ ಮತ್ತು ರಾಷ್ಟ್ರೀಯ ಹಿತವನ್ನು ರಕ್ಷಿಸುವ ಸ್ವರೂಪಗಳನ್ನು ಪಡೆದಿವೆ ಈ ಎಲ್ಲ ಯಜ್ಞಗಳ ಮೂಲಕ ಮಾನವನು ವ್ಯಷ್ಟಿ ಸಮಷ್ಟಿಗಳ ಜಡ ಚೇತನಗಳ, ಇಹ--ಪರಗಳ, ಮಾನವ ಭಗವಂತನ ನಡುವೆ ಇರುವ ಸೂಕ್ಷ್ಮ ಸಂಬಂಧವನ್ನು ಅರಿತುಕೊಳ್ಳುವಂತಹ ಸನ್ನಿವೇಶವನ್ನು ಉಂಟುಮಾಡುವುದೂ ಆಗಿದೆ

ಯಜಮಾನಸ್ಯ ಪಶೂನ್ ಪಾಹಿ, ಅಶ್ವಂ ಮಾ ಹಿಂಸೀ ಪರಮೇ ವ್ಯೋಮನ್, ಇಮಂ ಮಾ ಹಿಂಸೀ ಏಕ ಶಫಂ ಪಶುಮ್ ಅವಿಂ ಮಾ ಹಿಂಸೀ (ಹೇ ಭಗವಂತನೇ ಯಜಮಾನನ ಪಶುಗಳನ್ನು ರಕ್ಷಿಸು, ನಮ್ಮ ಅಶ್ವಗಳನ್ನು ಹಿಂಸಿಸದೆ ಡ ಗೋವು ಮುಂತಾದು ಗೊರಸುಳ್ಳ ಪ್ರಾಣಿಗಳನ್ನು ಹಿಂಸಿಸಬೇಡ ಕುರಿಗಳನ್ನು ಹಿಂಸಿಸಬೇಡ) ಮುಂತಾದ, ಕರ್ಮಕಾಂಡದಲ್ಲಿ ಬರುವ ಮಾತುಗಳನ್ನು ಗಮನಿಸಿದಾಗ, ಪ್ರಾರಂಭಿಕ ದೆಸೆಯಲ್ಲಿ ಪಶುಬಲಿಕೊಡುವಂತಹ ಯಜ್ಞಯಾಗಗಳು ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ

ಬರಬರುತ್ತಾ ಸಾಮಾಜಿಕ ಪರಿಸ್ಥಿತಿಗಳು ಬದಲಾವಣೆಯಾಗಿ, ಕ್ಷತ್ರಿಯ ಕುಲೋತ್ಪನ್ನರೂ, ಮಾಂಸಾಹಾರಿಗಳೂ, ಮದ್ಯಪಾನವ್ಯಸನಿಗಳೂ ಆದ ಸಾಮಂತರು, ಮಾಂಡಲಿಕರು, ಚಕ್ರವರ್ತಿಗಳು ರಾಜ್ಯವನ್ನು ಆಳಲು ತೊಡಗಿದಾಗ, ಅವರ ಮೆಚ್ಚಿಗೆಗಾಗಿ, ಅವರ ಪ್ರತಿಷ್ಠೆಯನ್ನು ಹೆಚ್ಚಿಸುವುದಕ್ಕಾಗಿ, ಅವರ ವೈಬವವನ್ನು ಮೆರೆಸುವುದಕ್ಕಾಗಿ ಆಸ್ಥಾನೀಯ ಪುರೋಹಿತ ವರ್ಗದವರು, ತಾಂತ್ರಿಕರು, ಯಜ್ಞಯಾಗಗಳಲ್ಲಿ ಪಶುಬಲಿಯನ್ನು ಆಚರಣೆಗೆ ತಂದರು ಎಂದು ಊಹಿಸಬಹುದಾಗಿದೆ ಏಕೆಂದರೆ, ಸಂಹಿತೆಗಳಲ್ಲಿ ಪಶುಬಲಿಯ ಬಗ್ಗೆ ವಿವರಣೆಯಿಲ್ಲ, ಪ್ರತಿಯಾಗಿ ಪಶುರಕ್ಷಣೆಯ ಬಗ್ಗೆ ಸಾಕಷ್ಟು ವಿಷಯ ಸಿಗುತ್ತದೆ ಅನಂತರದಲ್ಲಿ ರಚಿತವಾಗಿರ ಬಹುದಾದ ಬ್ರಾಹ್ಮಣಗಳಲ್ಲಿ ಮಾತ್ರ ಪಶುಬಲಿಯ ಬಗ್ಗೆ ವಿವರಣೆ ದೊರೆಯುತ್ತದೆ

ದಿನಗಳೆದಂತೆ ಈ ಯಜ್ಞಯಾಗಗಳು ಕೇವಲ ಸಾಂಪ್ರದಾಯಕ ಆಚರಣೆಗಳಾಗಿ ಮಾರ್ಪಟ್ಟವು, ಅಲ್ಲದೆ ಅವು ವ್ಯಕ್ತಿಯ, ಸಮಾಜದ, ಗ್ರಾಮದ, ರಾಷ್ಟ್ರದ ಹಿತವನ್ನು ರಕ್ಷಿಸುವ ದಿಶೆಯಲ್ಲಿ ವಿಫಲವಾದುವು

ಇದನ್ನು ಗಮನಿಸಿದ ಚಾರ್ವಾಕ ಮುಂತಾದವರು "ಪಶುಶ್ಚೇತ್ ನಿಹತ ಸ್ವರ್ಗಂ ಜೋತಿಷ್ಟೋಮೇ ಗಮಿಷ್ಯತಿ | ಸ್ವಪಿತಾ ಯಜಮಾನೇನ ತತ್ರ ಕಧಂ ನ ಹಿಂಸ್ಯತೇ ||" (ಪಶುವನ್ನು ಕೊಂದು ಅಗ್ನಿಯಲ್ಲಿ ಆಹುತಿ ನೀಡಿ ಯಜ್ಞಮಾಡುವುದ

ರಿಂದ, ಪಶುವು, ಸ್ವರ್ಗ ಸೇರುವುದಾದರೆ, ಯಜಮಾನನು, ತನ್ನ ತಂದೆಯನ್ನು ಕೊಂದು ಅವನನ್ನು ಸ್ವರ್ಗಕ್ಕೆ ಏಕೆ ಕಳಿಸಬಾರದು?) ಎಂದು ಪ್ರಶ್ನಿಸುತ್ತಾ ಪಶುಬಲಿ ಪದ್ಧತಿಯನ್ನು ಖಂಡಿಸುತ್ತಿದಗಿದರು ಮುಂಡಕೋಪನಿಷತ್ತಿನಲ್ಲಿಯೂ ಸಹ ಇಂತಹ ಮಾತನ್ನೇ ಕೇಳುತ್ತೇವೆ "ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ | ಏತತ್ ಶ್ರೇಯೋ ಯೇಽಭಿನಂದಂತಿ ಮೂಢಾ ಜರಾ ಮೃತ್ಯುಂ ತೇ ಪುನರೇವಾಪಿ ಯಂತಿ ||" (ಈ ಯಜ್ಞಗಳು ತೂತುಬಿದ್ದ ನಾವೆಯಂತೆ ಹದಿನಾರು ಋತ್ವಿಜರು, ಯಜಮಾನ, ಗೃಹಿಣಿ ಹೀಗೆ ಹದಿನೆಂಟು ಜನರಿಂದ ನಡೆಯುವ ಈ ಯಜ್ಞರೂಪ ಕರ್ಮಗಳು ಅತ್ಯಂತ ದುರ್ಬಲವಾದುವುಗಳು ಈ ಯಜ್ಞಗಳನ್ನು ಅಭಿನಂದಿಸಿ, ಗೌರವಿಸುವ ಮೂಢರು ಮತ್ತೆ ಮತ್ತೆ ವೃದ್ಧಾಪ್ಯ ಮತ್ತು ಮರಣಗಳಿಗೆ ಈಡಾಗುತ್ತಿರುತ್ತಾರೆ )

ಹೀಗಾಗಿ ವರ್ಷಗಳು ಕಳೆದಂತೆ, ಕರ್ಮಮಾರ್ಗವು, ಜನಸಾಮಾನ್ಯರಿಂದ ದೂರೀಕರಿಸಲ್ಪಟ್ಟು, ಸಮಾಜದಲ್ಲಿ, ತನ್ನ ಪ್ರಧಾನತೆಯನ್ನು ಕಳೆದುಕೊಂಡಿತು

## ಜ್ಞಾನಮಾರ್ಗ

ಕರ್ಮಮಾರ್ಗವು ಜನಮನ್ನಣೆಯಿಂದ ದೂರ ಸರಿಯುತ್ತಿರುವುದನ್ನು ಗಮನಿಸಿದ, ವೈದಿಕ ಋಷಿಗಳಿಗೆ, ಮುಕ್ತಿ ಸಾಧನೆಯತ್ತ ಜನಸಾಮಾನ್ಯರ ಗಮನವನ್ನು ಸೆಳೆಯಲು, ಅವರಲ್ಲಿ ಮುಕ್ತಿ ಸಂಪಾದನೆಯ ಹಂಬಲವನ್ನು ಜಾಗ್ರತಗೊಳಿಸಲು ಮತ್ತೊಂದು ಪರ್ಯಾಯ ಮಾರ್ಗವನ್ನು ಕಂಡುಕೊಳ್ಳುವುದು ಅನಿವಾರ್ಯವಾಯಿತು ಅವರೂ ಸ್ವತ ಈ ಯಜ್ಞಯಾಗಗಳು ಕೇವಲ ಸಾಂಪ್ರದಾಯಕ ಸ್ವರೂಪವನ್ನು ಪಡೆದು, ತಮ್ಮ ಅಂತಸ್ಸತ್ವವನ್ನು ಕಳೆದುಕೊಂಡಿರುವುದನ್ನು ಅರಿತರು ಇದರಿಂದ ಅವರಿಗೆ ಹೊಸತೊಂದು ಮಾರ್ಗವನ್ನು ಕಂಡುಕೊಳ್ಳುವುದು ಅನಿವಾರ್ಯವಾಯಿತು

ಈ ದೃಷ್ಟಿಯಿಂದ ಮುಂದುವರಿದ ವೇದಕಾಲೀನ ಋಷಿಗಳು, ಪರಂಪರೆಯಿಂದ ಬಂದಿರುವ "ಯಜ್ಞ" ಶಬ್ದವನ್ನು ಉಳಿಸಿಕೊಳ್ಳಬಯಸಿದರು ಕರ್ಮಮಾರ್ಗದ ಯಜ್ಞಗಳಲ್ಲಿ ಬಾಹ್ಯಕಾರ್ಯಕ್ಕೆ ಬಾಹ್ಯ ಆಚರಣೆ ಪ್ರಧಾನತೆಯಿತ್ತು "ಯಜ್ಞ" ಶಬ್ದ ಈ ಕಾರ್ಯವನ್ನು ಈ ಆಚರಣೆಯನ್ನು ಪ್ರತಿಬಿಂಬಿಸುವ ಪದವಾಗಿ ಬಳಸಲ್ಪಡುತ್ತಿತ್ತು ಈಗ ಬಾಹ್ಯಕಾರ್ಯದ, ಬಾಹ್ಯ ಆಚರಣೆಯ ಅರ್ಥ ಪ್ರತಿಪಾದ

ನೆಗೆ ಬದಲಾಗಿ ಮಾನವನ ಅಂತ ಕರಣ ಪ್ರವೃತ್ತಿಗೆ ಸಂಬಂಧಿಸಿದಂತೆ, "ಯಜ್ಞ' ಶಬ್ದಕ್ಕೆ ಹೊಸ ಅರ್ಥ ವನ್ನು ಈ ಋಷಿಗಳು ಕಂಡುಕೊಂಡು, ಅದನ್ನು "ಜ್ಞಾನ ಎಂಬ ಹೆಸರಿನಿಂದ ಕರೆದರು ಮಂತ್ರೋ ಚ್ಚಾರಣೆಯ ಮೂಲಕ, ಮಾನವನ ಮಾನಸಿಕ ಪ್ರವೃ ತ್ತಿಯನ್ನು ಪ್ರಧಾನ ಸಾಧನವನ್ನಾಗಿ ಮಾಡಿಕೊಂಡು ಇಂದ್ರಾದಿ ದೇವತೆಗಳಿಗಿಂತಲೂ ಅಧಿಕ ಶಕ್ತನೂ, ಅಧಿಕ ವ್ಯಾಪ್ತನೂ ಅಧಿಕಜ್ಞಾನಿಯೂ ಆದ "ಪರ ಬ್ರಹ್ಮ ನನ್ನು ಅರಿಯುವ, ಅವನ ಸಾನ್ನಿಧ್ಯವನ್ನು ಪಡೆಯುವ ಅದವಾ ಅವನೇ ತಾನಾಗುವ ಗುರಿ ಯನ್ನು ಇವರು, ಪ್ರತಿಪಾದಿಸಿದರು ಈ ದೃಷ್ಟಿ ಯಿಂದ ಪ್ರತಿಪಾದಿತವಾದ ವಿಷಯಗಳನ್ನು 'ಉಪ ನಿಷತ್ತುಗಳು ಎಂದು ಕರೆದು ಈ ಮಾರ್ಗವನ್ನು "ಜ್ಞಾನಮಾರ್ಗ' ಎಂದು ಹೆಸರಿಸಿದರು

ಅನಂತರದಲ್ಲಿ ಆದಿ ಶಂಕರಾಚಾರ್ಯರು ಮತ್ತು ಅವರ ಅನುಯಾಯಿಗಳು ಈ ಜ್ಞಾನಮಾರ್ಗಕ್ಕೆ ಹೊಸ ಉತ್ತೇಜನವನ್ನು ಕೊಟ್ಟು, ಜನ ಮತ್ತು ಸಮಾಜ ಈ ಪದ್ಧತಿಯನ್ನು ಗೌರವಿಸುವಂತೆ, ಆಚ ರಿಸುವಂತೆ ಮಾಡಿದರು ಅಲ್ಲದೆ ಶ್ರೀ ಶಂಕರಭ ಗವತ್ಪಾದರು, ಈ ಜ್ಞಾನಮಾರ್ಗದ ದೃಷ್ಟಿಯಿಂದ ಬ್ರಹ್ಮಸೂತ್ರ, ಉಪನಿಷತ್ತು ಮತ್ತು ಭಗವದ್ಗೀತೆಗೆ ವ್ಯಾಖ್ಯಾನವನ್ನೂ ಬರೆದರು ಈ ಮಾರ್ಗದ ರಕ್ಷ ಣೆಗಾಗಿಯೇ ಅವರು ಭಾರತದ ನಾಲ್ಕು ದಿಕ್ಕಿನಲ್ಲಿ ಪೂರ್ವದಲ್ಲಿ ಪುರಿಯಲ್ಲಿ, ದಕ್ಷಿಣದಲ್ಲಿ ಶೃಂಗೇ ರಿಯಲ್ಲಿ, ಪಶ್ಚಿಮದಲ್ಲಿ ದ್ವಾರಕೆಯಲ್ಲಿ, ಉತ್ತರದಲ್ಲಿ ಬದರಿಯಲ್ಲಿ ಮಠಗಳನ್ನು ಸ್ಥಾಪಿಸಿದರು ಇದರ ಪರಿಣಾಮವಾಗಿ ಜ್ಞಾನಮಾರ್ಗವು ಬಹಳ ವೇಗ ಪ್ರವರ್ಧಮಾನಕ್ಕೆ ಬಂದಿತು

ಬರಬರುತ್ತಾ, ಜ್ಞಾನಮಾರ್ಗಿಗಳು ಯಜ್ಞಯಾಗ ಗಳನ್ನು ಖಂಡಿಸತೊಡಗಿದರು ಆಚಾರ್ಯ ಶಂಕ ರರು ಮತ್ತು ಅವರ ಸಮಕಾಲೀನ ಅನುಯಾಯಿ ಗಳ ನಂತರ ಜ್ಞಾನಮಾರ್ಗದ ಅಂತಸ್ಸತ್ವಗಳನ್ನು ಜನಸಾಮಾನ್ಯರಿಗೆ ತಿಳಿಯುವಂತೆ ಹೇಳುವ ಪ್ರಭಾ ವಪುರುಷರು ಕಡಮೆಯಾದರು ಇದರ ಪರಿ ಣಾಮವಾಗಿ, ದಿನಗಳೆದಂತೆ, ಜ್ಞಾನಮಾರ್ಗಿಗಳು ಹೇಳುವ ನಿರ್ಗುಣೋಪಾಸನೆ, ಜಗತ್ತು, ಮಾಯೆ, ಮಿಥ್ಯೆ ಮುಂತಾದುವು ಜನ ಸಾಮಾನ್ಯನಿಗೆ ಅರ್ಥವಾಗದ ವಿಷಯಗಳಾದುವು, ಅವು ಅದ ರನ್ನು ಆಕರ್ಷಿಸುವಲ್ಲಿ ವಿಫಲಗೊಂಡವು ಅಲ್ಲದೆ ಈ ಪಂಥದವರು ಬರಬರುತ್ತಾ, ವ್ಯಕ್ತಿಗತವಾದ ಆತ್ಮೋದ್ಧಾರವನ್ನೇ ಮುಖ್ಯ ಗುರಿಯನ್ನಾಗಿ ಮಾಡಿ ಕೊಂಡದ್ದರಿಂದ, ಮಾನವ ಕುಟುಂಬದ ಸಮಾ ಜದ, ಗ್ರಾಮದ, ರಾಷ್ಟ್ರದ ಹಿತರಕ್ಷಣೆ ಮತ್ತು ಹಿತಪಾಲನೆಯಿಂದ, ಅವರು, ಬಹುದೂರ ಉಳಿ ದರು ಹೀಗಾಗಿ ಜ್ಞಾನಮಾರ್ಗವು ಜನಸಾಮಾನ್ಯ ನಿಂದಲೂ ದೂರವಾಯಿತು

## ಭಕ್ತಿಮಾರ್ಗ

ಕರ್ಮಮಾರ್ಗವು ಜನ ಸಾಮಾನ್ಯರ ಬೆಂಬಲ ಪಡೆಯಿತಾದರೂ, ಬರುಬರುತ್ತಾ, ಅದು ಅತಿ ಲೌಕಿಕವಾದುದು, ಮತ್ತು ಜೀವನದ ಗುರಿಗಳನ್ನು ಸಾಧಿಸಲು ಅಸಮರ್ಥವಾದುದು ಎಂಬ ಅಪವಾ ದಕ್ಕೆ ಗುರಿಯಾಗಿ, ಕ್ಷೀಣ ದೆಸೆಯಲ್ಲಿ ಮುಂದುವ ರಿಯಿತು ಜ್ಞಾನಮಾರ್ಗವು ಸಾಮಾನ್ಯ ಮಾನವ ನಿಗೆ ಎಟುಕದ ಉನ್ನತಸ್ತರದಲ್ಲಿ ನಿಂತಿದ್ದರಿಂದ, ಅವರು ಹೇಳುವ "ಜಗನ್ಮಿಥ್ಯಾ 'ಅಹಂ ಬ್ರಹ್ಮಾ' ಮುಂತಾದ ತತ್ವಗಳು, ಅವನ ದೈನಂದಿನ ಜೀವನ ದೊಂದಿಗೆ ಸಾಮರಸ್ಯವನ್ನು ಪಡೆಯದೆ ಹೋ ದುದರಿಂದ, ಈ ಮಾರ್ಗವು "ನಿರರ್ಥಕ ಎಂಬ ಟೀಕೆಗೆ ಗುರಿಯಾಗಿ, ಕೇವಲ ವೈಯಕ್ತಿಕ ಆತ್ಮೋದ್ಧಾರದ ಬಗ್ಗೆ ಆಸಕ್ತಿಯುಳ್ಳವರ ಪಂಥವಾಗಿ ಮುಂದುವರಿ ಯಿತು

ಈ ಪರಿಸ್ಥಿತಿಯಲ್ಲಿ, ಆಗಿನ ಋಷಿಗಳಿಗೆ, ಕರ್ಮ ಮಾರ್ಗ ಮತ್ತು ಜ್ಞಾನಮಾರ್ಗಗಳ ಹಿನ್ನೆಲೆಯನ್ನು ಉಳಿಸಿಕೊಂಡ ಹೊಸಮಾರ್ಗದತ್ತ ಜನರನ್ನು ಆಕ ರ್ಷಿಸಬೇಕಾದ ಅನಿವಾರ್ಯ ಪ್ರಸಂಗ ಒದಗಿ ಬಂದಿತು ಈ ದೃಷ್ಟಿಯಿಂದ ಹುಟ್ಟಿಕೊಂಡ ಹೊಸ ಪಂಥವೇ ಭಕ್ತಿಮಾರ್ಗ

ಭಕ್ತಿಮಾರ್ಗಿಗಳು, ಕರ್ಮಮಾರ್ಗಿಗಳ ಯಜ್ಞ ಯಾಗಗಳ ಉದ್ದೇಶಗಳಾದ ದೈವೀಶ್ರದ್ಧೆ, ವ್ಯಕ್ತಿ, ಸಮಾಜ, ಗ್ರಾಮ ಮುಂತಾದುವುಗಳನ್ನು ಉಳಿ ಸಿಕೊಳ್ಳುವ ಮತ್ತು ಜ್ಞಾನಮಾರ್ಗಿಗಳ ಆತ್ಮೋದ್ಧಾ ರಕ್ಕೆ ಕಾರಣವಾದ ನಿರಾಕಾರ ಸ್ವರೂಪದ ದೈವೀ ಕಲ್ಪನೆ ಮತ್ತು ಅದರ ಆರಾಧನಾ ಪ್ರವೃತ್ತಿ ಇವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು, "ಭಗವಂತ ನಲ್ಲಿ ಸಂಪೂರ್ಣಶರಣಾಗತಿಯನ್ನು ಹೊಂದುವುದೇ "ಯಜ್ಞ" ಎಂದು 'ಯಜ್ಞ' ಶಬ್ದಕ್ಕೆ ಹೊಸ ಅರ್ಥ ವನ್ನು ಕೊಟ್ಟರು ಇದನ್ನು "ಈಶ್ವರಾರ್ಪಣ' "ಬ್ರಹ್ಮಾ ರ್ಪಣ" ಮುಂತಾದ ಹೆಸರುಗಳಿಂದಲೂ ಕರೆದರು ಭಗವಂತನ ವೈವಿಧ್ಯಮಯವಾದ ದಿವ್ಯತೆ, ವೈಭವ ಮುಂತಾದುವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆ ಯನ್ನೇ "ಜ್ಞಾನ ಎಂದು ಕರೆದು, ಜ್ಞಾನ ಮಾರ್ಗಿ ಗಳು ಹೇಳುವ "ಜ್ಞಾನ ಶಬ್ದಕ್ಕೆ ಹೊಸನೋಟವನ್ನು ಕೊಟ್ಟರು ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ ಭಗ ವಂತನ ಅಸ್ತಿತ್ವವನ್ನು ಜನ ಸಾಮಾನ್ಯರು ಅರಿತುಕೊ ಳ್ಳುವಂತೆ ಮಾಡುವ, ಅವನಿಗೆ ತನ್ನ ಎಲ್ಲ ಸುಖ ದು ಖಗಳನ್ನೂ ಅರ್ಪಿಸುವ ಮತ್ತು ತಾನು ಮಾಡಿದ ಕಾರ್ಯಗಳ ಫಲಾಫಲಗಳ ನಿರ್ಣಯವನ್ನು ಅವ ನಿಗೇ ಬಿಡುವ ಮನೋವೃತ್ತಿಯನ್ನು ಜಾಗ್ರತಗೊ ಳಿಸುವಂತೆ ಮಾಡುವ ದೃಷ್ಟಿಯಿಂದ, ಭಕ್ತಿಮಾರ್ಗಿ ಗಳು "ಯಜ್ಞ' ಮತ್ತು "ಜ್ಞಾನ' ಶಬ್ದಗಳಿಗೆ ಹೊಸ ಅರ್ಥಕೊಡುವುದು ಅನಿವಾರ್ಯವಾಯಿತು ಯಜ್ಞ ಕುಂಡಕ್ಕೆ ಪಶು ವಾನ್ನ ತುಪ್ಪ ಮೊದಲಾದುವನ್ನು ಅರ್ಪಿಸಿ, ಅಗ್ನಿ ಎಂಬ ಮಧ್ಯವರ್ತಿಯ ಮೂಲಕ ತಮ್ಮ ಕಷ್ಟಗಳನ್ನು ಪರಿಹರಿಸುವಂತ ಭಗವಂತನನ್ನು ಪ್ರಾರ್ಥಿಸುವುದು ನಿಜವಾದ ಯಜ್ಞವಲ್ಲವೆಂದೂ, ಋತವಾದ ಮಾನವೀಯ ಮೌಲ್ಯಗಳುಳ್ಳ ಬಾಳು ವೆಯೇ ಯಜ್ಞವೆಂದೂ, ಕ ವಲ ಮಾನಸಿಕ ಚಿಂತ ನೆಯೇ ಜ್ಞಾನವಲ್ಲವೆಂದೂ, ಕಾಯೇನ ವಾಚಾ ಮನಸಾ ಭಗವಂತನಿಗೆ ತಮ್ಮನ್ನು ತಾವು ಅರ್ಪ ಸಿಕೊಳ್ಳುವುದು ನಿಜವಾದ ಜ್ಞಾನವೆಂದೂ ಸಾರಿ ದರು ಈ ಪಂಥದವರು ನಿರ್ಗುಣೋಪಾಸನೆ ಗಿಂತ ಸಗುಣೋಪಾಸನೆಗೆ, ತನ್ಮೂಲಕ ಸರ್ವಸ ಮರ್ಪಣ ಪ್ರವೃತ್ತಿಗೆ ಒತ್ತು ಕೊಟ್ಟರು ಇದರ ಲ್ಲಿಯೆ ಅವರು, ವ್ಯಕ್ತಿಯ ಕುಟುಂಬದ, ಸಮಾ ಜದ, ಗ್ರಾಮದ, ರಾಷ್ಟ್ರದ, ವಿಶ್ವದ ಹಿತವನ್ನೂ ರಕ್ಷ ಣೆಯನ್ನೂ ಕಂಡರು

ಆಚಾರ್ಯ ಶಂಕರ ಭಗವತ್ಪಾದರೂ ಮತ್ತು ಅವರ ಅನುಯಾಯಿಗಳು ಜ್ಞಾನಮಾರ್ಗವನ್ನು ಪ್ರಸಾರ ಮಾಡುತ್ತಿದ್ದ ಕಾಲಕ್ಕೆ ಮೊದಲಿನಿಂದಲೇ ಈ ಭಕ್ತಿಪಂಥ ತನ್ನ ಪ್ರಭಾವವನ್ನು ಇತರ ಪಂಥ ಗಳ ಮೇಲೆ ಬೀರುವಷ್ಟರ ಮಟ್ಟಿಗೆ ಪ್ರಬುದ್ಧ ವಾಗಿ ಬೆಳೆದಿತ್ತು ಹಾಗಾಗಿ ಶಂಕರ ಭಗವತ್ಪಾ ದರು ಭಕ್ತಿಪಂಥದ ಅಂತಸ್ಸತ್ವವನ್ನು ಅರ್ಥಮಾಡಿ ಕೊಂಡು, ಅವರು, ಸಗುಣೋಪಾಸನೆಗೂ ಒತ್ತು ಕೊಟ್ಟರು ಈ ದೃಷ್ಟಿಯಿಂತಲೇ ಆಚಾರ್ಯ ಶಂಕ ರರು, ಆಗ ಪ್ರಚಲಿತವಿದ್ದ ಸೌರ, ಗಾಣಪತ್ಯ ಶಾಕ್ತ, ಶೈವ, ವೈಷ್ಣವ ಮತ್ತು ಭೈರವ ಈ ಸಗುಣೋ ಪಾಸನಾಪಂಥಗಳನ್ನು ಗೌರವಿಸಿ, ಷಣ್ಮತಸ್ಥಾಪನಾ ಚಾರ್ಯ ಎಂಬ ಮನ್ನಣೆಗೆ ಪಾತ್ರರಾದರು, ಅಲ್ಲದೆ ಪಂಚಾಯತನ ಪೂಜೆಯನ್ನು ಪುರಸ್ಕರಿಸಿ ಕರ್ಮ ಕಾಂಡ, ಜ್ಞಾನಕಾಂಡ ಮತ್ತು ಭಕ್ತಿಕಾಂಡಗಳು ಪರ ಸ್ಪರ ಪೂರಕಗಳು ಎಂಬುದನ್ನು ಸಾರಿದರು

ವೈಷ್ಣವ ಪಂಥದವರು ಭಕ್ತಿ ಮಾರ್ಗವನ್ನು ವಿಶಾ ಲಗೊಳಿಸಿ ಆರಜಕರಾಜನವರೆಗೆ, ಮನೆಯಿಂದ ಅರಮನೆವರೆಗೆ ಬಿತ್ತರಿಸಿದರು ಆದ್ದರಿಂದಲೇ ಈ ಪಂಥ ಇಂದು ಎಲ್ಲ ವರ್ಗದ, ಕಾಲದ, ದೇಶದ ಜನರ ಪಂಥವಾಗಿ, ಜನಸಾಮಾನ್ಯನನ್ನು ಧನ್ಯನನ್ನಾ ಗಿಸಿ, ಸಾರ್ವತ್ರಿಕ ಮನ್ನಣೆಯನ್ನು ಉಳಿಸಿಕೊಂಡು ಬೆಳೆಯುತ್ತಿದೆ

ವೈದಿಕ ಋಷಿಗಳು ಮಾನವನ ಉದ್ಧಾರಕ್ಕೆ ತೋರಿಸಿದ ಈ ಮೂರು ಮಾರ್ಗಗಳು ಬೇರೆಬೇರೆ ಯಾಗಿ ಕಂಡರೂ, ಅಂತಸ್ಸತ್ವದ ದೃಷ್ಟಿಯಿಂದ, ಅವು ಪರಸ್ಪರ ಪೂರಕಗಳು ಎಂಬುದು ಸ್ಪಷ್ಟವಾಗಿದೆ. ✱



ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ ತೋಮಾಲೆ ಅರ್ಚನೆ (ಮೂರು ಬಾರಿ) ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ ಊಂಜಲ್‌ಸೇವೆ ಬ್ರಹ್ಮೋತ್ಸವ ಕೋಯಿಲ್ ಆಳ್ವಾರ್ ತಿರುಮಂಜನ ಸಹಸ್ರ ಕಲಶಾಭಿಷೇಕ ತಿರುಪ್ಪಾವಡ ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ ತೋಮಾಲೆ ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ವೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದು ಬಾರಿಗೆ 10 ಶತಾಂಶ) ನಂತೆ ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು) ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ
**ಕಾರ್ಯನಿರ್ವಹಣಾಧಿಕಾರಿ**
ತಿ ತಿ ದೇ ತಿರುಪತಿ

ನಮೋ ऽ ಚಿಂತ್ಯ ಅದ್ಭುತ
ಅಕ್ಲಿಷ್ಟ ಜ್ಞಾನ ವೈರಾಗ್ಯ ರಾಶಯೇ |
ನಾಥಾಯ ಮುನಯೇ ಅಗಾಧ
ಭಗವದ್ಭಕ್ತಿ ಸಿಂಧವೇ ||

ಭಾವಾರ್ಥ ನಮ್ಮಂತವರ ಯೋಚನೆಗೂ ನಿಲುಕದ ಲೋಕವಿಲಕ್ಷಣವಾದ ಸುಲಭವಾದ ಜ್ಞಾನ ಮತ್ತು ವೈರಾಗ್ಯಗಳ ರಾಶಿಯಾಗಿಯೂ ಮತ್ತು ಭಗವದ್ಭಕ್ತಿಗೆ ಅಗಾಧವಾದ ಸಮುದ್ರವಂತೆಯೂ ಇರುವ ರಂಗನಾಥಮುನಿಗಳಿಗೆ ನಮಸ್ಕಾರ

ವಿಶೇಷಾರ್ಥ ನಾಥಮುನಿಗಳೆಂಬ ಭಗವನ್ನಾಮಧಾರಿಯಾದ ಅಂದರೆ ಸರ್ವಾತ್ಮನಾದ ಭಗವಂತನ ಹೆಸರಿನಲ್ಲಿ ಬೆಳಗುವ, ಅವನ ಶರೀರವಾದ ಪರಾಂಕುಶರ ಸಾಕ್ಷಾತ್ ಶಿಷ್ಯರಾದ ನಾಥಮುನಿಗಳು ದೇಹಾತ್ಮ ಸಂಬಂಧವನ್ನು ಮರೆಯದೆ ಇರುವವರು ಇಲ್ಲಿ ದೇಹ, ನಾಥಮುನಿ ಎಂಬ ಚೇತನ ದ್ರವ್ಯ ಇಲ್ಲಿ ಆತ್ಮ ಬಾಹ್ಯ ಚಕ್ಷುಸ್ಸಿಗೂ ಗೋಚರನಾಗಿರುವ ಸರ್ವಾತ್ಮನಾದ, ಶ್ರೀರಂಗದಲ್ಲಿ ಸ್ವಾಮಿತ್ವವನ್ನು ಸಂಬಂಧಪೂರ್ವಕವಾಗಿ ಪ್ರಕಾಶಪಡಿಸುವ ಶ್ರೀರಂಗನಾಥನೆಂದು ಹೆಸರುಪಡೆದವನು ಅವನು ಅರ್ಚಾರೂಪದಲ್ಲಿ ಗೋಚರನಾಗುವುದನ್ನು ಮುನಿ ಎಂದು ಪ್ರಕಾಶಗೊಳ್ಳುತ್ತಿದ್ದರೆ, ಅಂದರೆ ತನಗೆ ಆತ್ಮನಾಗಿರುವ ಭಗವಂತನನ್ನು ಸದಾ ಧ್ಯಾನದಲ್ಲಿಟ್ಟುಕೊಂಡು, ಅವನ ದೇಹವಾಗಿ, ನಿತ್ಯನಾದ ಚೇತನನನ್ನು ದೇಹದ ಮೇಲೆ ಮನಸ್ಸಿರದೆ ಅವರ ಬಾಳ್ವಿಗೆ ಸರ್ವವಿಧಕಾರಣವಾದ ಆತ್ಮನನ್ನೇ ಧ್ಯಾನಿಸುವ ಒಬ್ಬ ನಿಜವಾದ ನಾಶವಿಲ್ಲದ ಚಿರಂಜೀವಿ

ಈಶ್ವರ ದೇಹತ್ವಕ್ಕೆ ನಾಶವಿಲ್ಲ ಇಂತಹ ಭಗವದ್ವೈಭವ ಸ್ವರೂಪವಾದ ಮಹನೀಯ ರೊಬ್ಬರು ದೇಹತ, ಜ್ಞಾನತ ತಮಗ ಮಾರ್ಗದರ್ಶಿಯಾಗಿದ್ದುದು ಯಾಮುನಾಚಾರ್ಯರಿಗೆ ಅಪೂರ್ವಲಾಭ ಯೋಗ ನಾಥಮುನಿಗಳ ಪ್ರಭಾವ ಉಳಿದು ಮತ್ತಾವುದರ ಪ್ರಭಾವವು ಲೇಶವೂ ಇಲ್ಲ ಇದು ತಾನಾಗಿಯೋ ಏರ್ಪಟ್ಟ ಸಂಬಂಧ ಇದು ಕರ್ಮ ಫಲವಲ್ಲ ಕೃಪಾಫಲ ಈ ಹುಟ್ಟುಗುಣ ಅವರಿಂದ ಕಡೆಗಾಣಲು ಸಾಧ್ಯವೇ ಆಗಲಿಲ್ಲ ಏನೇಮಾಡಿದರೂ ಹುಟ್ಟುಗುಣವನ್ನು ಅಳಿಸಿಹಾಕಲು ಸಾಧ್ಯವಿಲ್ಲ ಅದು ನಿತ್ಯ ಶುಭ್ರ, ಸರ್ವತ್ರೈಕವಾಗಿ ಆನಂದಪ್ರದ ಆನಂದವು ಚೇತನನಿಗೆ ಸ್ವಾಭಾವಿಕ ನಾಥಮುನಿಗಳ ಪಾಲಿಗೆ ಭಗವಂತನ ಸಂಗದಲ್ಲಿ ಆಸಕ್ತಿ ಪ್ರಾಕೃತ ಪದಾರ್ಥಗಳಲ್ಲಿ ನಿರಾಸಕ್ತಿ ಇದು ಜ್ಞಾನವೈರಾಗ್ಯಫಲ ಈ ಜ್ಞಾನವು ಕೇವಲ ಚೇತನನ ವಿಷಯವಲ್ಲ ಆಲಂಬನ ಸಾಕ್ಷಾತ್ಕಾರ ಅಂದರೆ ಭಗ

# ಯಾಮುನಾಚಾರ್ಯರ ಸ್ತೋತ್ರ ರತ್ನ

---ಡಾ|| ವಿ ಎನ್ ಸಂಪತ್ಕುಮಾರಾಚಾರ್ಯ

ವತ್ಸಾಕ್ಷಾತ್ಕಾರ ಅವರೂ ಆತ್ಮನನ್ನು ಬಿಟ್ಟು ಪ್ರತ್ಯೇಕವಾಗಿ ಉಳಿಯಲು ಜ್ಞಾನಸ್ವರೂಪಕ್ಕ ಲೇಶಮಾತ್ರವೂ ಇಚ್ಛೆಯಿರುವುದಿಲ್ಲ ಆದರೆ ಜೀವಾತ್ಮನು ಅವನೊಡನ ಕಲೆತ ಅಚೇತನವೂ ಪರಮಾತ್ಮನ ಪದಾರ್ಥವಾದುದರಿಂದ ಆ ಸಂಬಂಧವನ್ನು ಮುಂದುವರಿಸಿಕೊಂಡು ಅವಕ್ಕೆ ಅಂಟಿಕೊಳ್ಳದ ಇರುವುದು ಮುಕ್ತ ಜೀವರ ಲಕ್ಷಣ ಅಂದಮೇಲೆ ಪದಾರ್ಥಗಳ ಪರಸ್ಪರ ಸಂಬಂಧ ತ್ಯಾಜ್ಯವಲ್ಲ ಆದರೆ ಆರೋಪಿತ ಸಂಬಂಧ ಕಲುಷಿತವಾದುದು ಅದು ಸ್ವರೂಪಕ್ಕೆ ಬೇರೆಯಾದುದರಿಂದ ಆ ರೀತಿ ಎಳ್ಳಷ್ಟೂ ಇರಬಾರದು ಈ ಭಾವವನ್ನು ತಮ್ಮ ತಾತಂದಿರು ಎಲ್ಲಾ ಹಂತಗಳಲ್ಲೂ ಕಂಡುಕೊಂಡಿದ್ದರು

ಈಶ್ವರ ಸಂಬಂಧವು ಶಾಶ್ವತವಾದ ನಿತ್ಯ ಸಂಬಂಧ ಅದನ್ನು ಮರೆತರ ಚೇತನಾಚೇತನ ವಸ್ತುಗಳಿಗೆ ಏರ್ಪಡುವ ಅಹಂ, ಮಮ ಭಾವಗಳನ್ನು ಪ್ರಚೋದಿಸುವ ವಿನಾಶಕರವಾದ ಅಂಟು ಸಂಬಂಧ ಇದು ಕೃತಕ ಎಂದಿಗೂ ಉಳಿಯಲಾರದು ಆದ್ದರಿಂದ ಅದನ್ನು ಪುರಸ್ಕರಿಸಲಾಗದು ಇದನ್ನೇ ಶಾಸ್ತ್ರ ಸಾರಜ್ಞರು ಅಚಿತ್ ಅಯನ ಅನಾದಿ ಸಂಬಂಧ ಎಂಬ ಪ್ರಯೋಗದಿಂದ ಜೀವಾತ್ಮನಿಗೆ ಅಚಿತ್ ಸಂಬಂಧ ಕರ್ಮೋಪಾಧಿಕ, ಸ್ವರೂಪವಿನಾಶಕ ಎಂದೂ ಅಯನ ಸಂಬಂಧ ವೆಂದರೆ ಪರಮಾತ್ಮನೊಡನೆ ಏರ್ಪಟ್ಟ ದೇಹಾತ್ಮ ಸಂಬಂಧ ಶಾಶ್ವತವಾದುದು, ಇದನ್ನು ಭಕ್ತಿಯಿಂದ ಉಳಿಸಿಕೊಂಡು ಬರದಿರಕು ಔಪಾಧಿಕ ಸಂಬಂಧವನ್ನು ವೈರಾಗ್ಯದಿಂದ ಮರೆಯುತ್ತ ಬರಬೇಕೆಂದು ಶಾಸ್ತ್ರಗಳಲ್ಲಿ ಪುರಸ್ಕಾರ, ತಿರಸ್ಕಾರ ಭಾವನೆಗಳನ್ನು ಪುರಸ್ಕರಿಸಲಾಗಿದೆ ಅವರ ತೋರಿಕೆಯಾದ್ದರಿಂದ ಈ ದರ್ಶನವನ್ನು ನೋಟನುಡಿ ನಡತೆಗಳನ್ನು ನಾಥಮುನಿಗಳಲ್ಲಿ ತೋರಿಬರುವ ಈ ವೈಶಿಷ್ಟ್ಯಕ್ಕೆ ಪರವಶರಾಗಿ 'ನಮ' ಅವರ ವಶಕ್ಕೆ ತಮ್ಮನ್ನು ಒಪ್ಪಿಸಿಕೊಳ್ಳುತ್ತಾರೆ ಅಂದರೆ ಅವರ ಪಾದಚ್ಛಾಯೆ ಅವರ ಅವರ ಪಾದರೇಖೆಯಾಗಿರುವುದೇ ತಮ್ಮ ಜನ್ಮದ ಸಾರ್ಥಕ್ಯವೆಂದು ಭಾವಿಸುತ್ತಾರೆ

ಇದರಲ್ಲಿ ಗಮನಿಸಬೇಕಾದುದು ಶರೀರಾತ್ಮ ಭಾವ ಲೌಕಿಕದಲ್ಲಿ ಶರೀರಕ್ಕ ಜ್ಞಾನವಿಲ್ಲ ಆತ್ಮನಿಗ ಜ್ಞಾನವಲ್ಲದ ಭಾವಯಾವುದೂ ಇಲ್ಲ ಆತ್ಮಪರಿತ್ಯಕ್ತ ಶರೀರಕ್ಕೆ ರುದ್ರಭೂಮಿಯೆ ಗತಿ ಆ ಭೂಮಿ ಕೂಡ ನನ್ನದ್ದೆಂದು ಕಾಣಸದಿರದೆ ಕಾದರ ಈಶ್ವರ ಶರೀರದ್ದ ಶಾಶ್ವತವಾಗಿ ಉಳಿಯದೆ ಹಾದರೆ, ಪರಮಾತ್ಮಾತ್ಮಕ ಜೀವಾತ್ಮ ಎಂಬ ಭಾವನ ವಿಸ್ಮೃತಿ ವಿಷಯವಾಗಕೂಡದು ಭಕ್ತಿ ಸಿಂಧುವಾದ ನಾಥಮುನಿಗ ತಾಜವಾದುದು ಸಾಂಸಾರಿಕ ಮತ್ತು ಕರ್ಮವನ್ನೂ ರಸ ಇದು ಅವರಿಗೆ ಸ್ವಾಭಾವಿಕವಾಗಿ ಬಂದಿತು ಅದು ಆಚಾರ್ಯದ್ವಾರ ಭಗವಂತನ ಸೌಮ್ಯ ಕಟಾಕ್ಷ ಮಧುರಕವಿ ಆಳ್ವಾರರ ನಂತರ ಈ ಕಟಾಕ್ಷವನ್ನು ಪಡೆದ ಪ್ರಥಮಾಚಾರ್ಯರು ಇವರು

ಯಸ್ಯ ದೇವೇ ಪರಾಭಕ್ತಿ
ಯಥಾ ದೇವೇ ತಥಾಗುರೌ |
ತಸ್ಯ ಏತೇ ಕಥಿತಾಹಿ ಅರ್ಥಾ
ಪ್ರಕಾಶಂತ ಮಹಾತ್ಮನ ||

ಯಾವವ್ಯಕ್ತಿಗೆ ಪರಮಾತ್ಮನಲ್ಲಿ ಅಕುಂಠಿತವಾದ ಭಕ್ತಿ ಇರುತ್ತದೆಯೋ ಮತ್ತು ದೇವನಲ್ಲಿ ಹಾಗೂ ಅದೇ ರೀತಿ ತೆರವೂ ದರ್ಪಣದ ಜ್ಞಾನ ಪ್ರದನಾದ ಆಚಾರ್ಯನಲ್ಲಿ ಇದ್ದರೆ ಅವನಲ್ಲಿ ಈ ವೇದದಲ್ಲಿ ಕಂಡುಬರುವ ಅವಶ್ಯಜ್ಞಾತವ್ಯವಾದ ತತ್ತ್ವಾರ್ಥಗಳು ಎಂದೆಂದಿಗೂ ಬೆಳಗುತ್ತವೆ ಅವನು ನಿಜವಾಗಿಯೂ ಮಹಾತ್ಮನಾಗುತ್ತಾನೆ ಅಂದರ ವೇದನಲ್ಲಿ ಮೂಡಿದ ಎಕ್ತಿ ದೇವಪ್ರಕಾಶಕನಾದ ಗುರುವಿನಲ್ಲಿ ಮಾರ್ಪಾಡಿಲ್ಲದೆ ಇದ್ದರೆ ಅವನು ಮಹಾತ್ಮ 'ಆಚಾರ್ಯದೇವೋಭವ ಎಂಬ ತತ್ತ್ವವನ್ನು ಪಾಲಿಸುವ ಅಪೂರ್ವ ವ್ಯಕ್ತಿ ಅಂತಹವನಿಗೆ ತೋರಿಸಿಕೊಟ್ಟ ವಿಷಯಗಳೆಲ್ಲ ಮರೆಯದೆ ಉಳಿದುಕೊಳ್ಳುತ್ತವೆ ತತ್ತ್ವದಲ್ಲಿ ಅಡಗಿರುವ ಭಾವಾಂತರವು ತಾವಾಗಿ ತೋರುತ್ತವೆ ತತ್ಫಲವಾಗಿ ಅವನು ಮಹಾತ್ಮನಾಗುತ್ತಾನೆ ಪರಬ್ರಹ್ಮದ ಅವನಿಗೆ ಆತ್ಮನಾಗಿ ಉಳಿದುಕೊಳ್ಳುತ್ತಾನೆ ಪರತಮತತ್ತ್ವ ಅಂದರ ಸರ್ವಕಾರಣ, ರಕ್ಷಕ, ಸ್ವಯಂಪ್ರೇರಿತ, ಉಜ್ಜೀವನಕ್ಕೆ ಏಕಕಾರಣ ಇದೆಲ್ಲವೂ ಸ್ವಯಂ ಕರ್ತವ್ಯವೆಂಬ ಭಾವನೆಯಲ್ಲಿ ಎಸಗುತ್ತ ಪರೋಪಕಾರವೆಂಬ ಭಾವನ ಪರ

ಮಾತ್ರ ನಿಗೂ ತೊ ರುವುದಿಲ್ಲ ಈ ವೈಯಿವನ್ನು ಜನಸ್ತೊ ಮಕ್ಕೆ ತೊ ರುವ ಆಚಾರ್ಯನು ತಾನು ಭಗವಂತನ ವೈಭವ ಎಂದು ಕಾಣಿಸುತ್ತಾನೆ ಇವ ನೊಬ್ಬನೆ ಗು ಅವಿವೇಕವೆಂಬ ಕತ್ತಲೆಯನ್ನು ರು ತಡೆಯುತ್ತಾನೆ ಸದಾವಿವೆ ಕಿಯಾಗಿರುತ್ತಾನೆ ಮೂಂಕಾರಣ ಪರಬ್ರಹ್ಮನ ಪ್ರತಿಬಿಂಬವಾಗಿರುವು ದಾಗಿದೆ ಅಂದರೆ ತಾನು ಪರಬ್ರಹ್ಮನಂತೆ ಕಾಣಿಸಿ ಕೊಳ್ಳುವುದಿಲ್ಲ ಅಂದಮೇಲೆ ಪರಬ್ರಹ್ಮನ ಪ್ರಭಾವ ಎಂಬ ಭಾವನೆಯನ್ನು ಹೊರಗಡಹುತ್ತಾನೆ

ಇವರಲ್ಲಿ ಕೂಳೆಯಬಾವ ನಾನು ಎಂಬ ಶಬ್ದ ದಿಂದ ಗೋಚರವಾಗಬಲ್ಲ ತನ್ನನ್ನು ತಾನೇ ಕೊಂಡಾಡುವ ಅಹಂಬಾವ ಬಗವಂತನ ಸಂಬಂ ದವಿದ್ದರೂ ಅವನ್ನು ಉದಾಸೀನಮಾಡಿ ಅಹಂ ಶಬ್ದವದಲ್ಲಿ ಉಳಿಸಿ ಕೊಂಡಿರುವ ಪ್ರತ್ಯೇಕತೆಯ ಸೂಬ ಗನ್ನು ಬಹಿರಂಗ ಪಡಿಸುವುದೆ ಆತ್ಮವಿನಾಶಕ್ಕೆ ಮೂಂಕಾರಣ ಇಲ್ಲವಾದರೆ ಪರಬ್ರಹ್ಮನಿಗೆ ಅನು ಕೂಲವಾದ ಪದಾರ್ಥ ಆಗಲಾರನು ಆದ್ದರಿಂದ ಸಾದೃಶ್ಯಬಾವ ತೂರದು ಪಾರತಂತ್ರಬಾವ ಉಳಿ ಸಿಕೊಂಡು ಪರಬ್ರಹ್ಮಕ್ಕೆ ಪ್ರತಿನಿದಿ ಆಗದೆ ಅವನ ಪ್ರತಿಪಂನವಾಗಿ ಉಳಿದುಕೊಳ್ಳುವುದೇ ಈ ಶ್ಲೋಕ ದಲ್ಲಿ ತೋರಿಬರುವ ಮಹಾತ್ಮಶಬ್ದಕ್ಕೆ ತಾತ್ಪರ್ಯ ಅಂತಹ ವ್ಯಕ್ತಿಗೆ ಹೇಳಿಕೊಟ್ಟದ್ದು, ಕೇಳಬೇಕಾ ದುದು, ಕೈಬಿಟ್ಟಿರುವುದು ಎಲ್ಲವೂ ಗೋಚರ ಆದ್ದ ರಿಂದ ಈ ಶಬ್ದಕ್ಕೆ ತನಗೆ ಸದೃಶವಾದ ವಸ್ತು ಅಂತ ರವಿಲ್ಲದ ಹಿರಿಮೆಯುಳ್ಳ ಈಶ್ವರ ಪರತಂತ್ರನಾದ, ಪ್ರಶಸ್ತತಮವಾದ ಚೇತನ ವಸ್ತು ಎಂದು ತಾತ್ಪರ್ಯ

ಚೇತನರೆಲ್ಲರೂ ಒಂದೇ ಸಮನಾಗಿರುವುದ ರಿಂದ ಎಲ್ಲರಿಗೂ ಈ ಯೋಗ ಸಹಜ, ಆವಶ್ಯಕ ಆದರೆ ಆರಂಭದಲ್ಲೇ ಇದು ಪೂರ್ಣವಿಕಾಸಗೊಳ್ಳು ವುದು ಕ್ವಚಿತ್ ಕ್ವಚಿತ್ ಎಂಬಂತೆ ಅತಿ ವಿರಳ ಅವರು ಕೇವಲ ಆತ್ಮನಾಗಿ ಉಳಿದುಕೊಳ್ಳದೆ ಮಹಾ ತ್ಮರಾಗಿಯೇ ಬೆಳಗುತ್ತಾರೆ ಈ ನೋಟದಲ್ಲಿ ತಮಗೆ ತೋರಿಬಂದಿರುವ ನಾದಮುನಿಗಳು ತಮಗೆ ಸರಿ ದೂಗುವ ಮತ್ತೊಂದು ವ್ಯಕ್ತಿ ಇಕ್ಕದೆ ಅವರೊಬ್ಬರೇ ಬೆಳಗುತ್ತಿರುವುದರಿಂದ, ಆ ಮಹಿಮೆ ಸಾರ್ವತ್ರಿಕ ವಾಗಿ ವ್ಯಕ್ತಿ ವಿಶೇಷದಲ್ಲಿ ಮಾತ್ರ ಪೂರ್ಣವಾಗಿ ಬೆಳ ಗುತ್ತದೆ ಎಂಬುದನ್ನು ವಿವರಿಸುವುದರ ಮೂಲಕ ಯಾಮುನಾಚಾರ್ಯರು ತಮ್ಮ ಪಿತಾಮಹ ಮತ್ತು ಪರಮಗುರುವನ್ನು ವರ್ಣಿಸಿ ಹಿಗ್ಗುತ್ತಾರೆ

ಶ್ಲೋಕ ೨

ತಸ್ಮೈ ನಮೋ ಮದುಜಿದ್
ಅಂಘ್ರಿಸರೋಜ ತತ್ವ
ಜ್ಞಾನ ಅನುರಾಗ ಮಹಿಮಾ
ಅತಿಶಯಾಂತ ಸೀಮ್ನೇ |
ನಾದಾಯ ನಾದಮುನಯೇ
ಅತ್ರಪರತ್ರ ಚಾಪಿ
ನಿತ್ಯಂ ಯದಿ ಯ ಚರಣೌ
ಶರಣಂ ಮದೀಯಂ ||

ಭಾವಾರ್ಥ ಮದುಸೂದನನ ಪಾದಕಮಲ ಗಳ ಯದಾರ್ಥವಾದ ಜ್ಞಾನ, ಅನುರಾಗ, ಮಹಿಮೆ ಗಳ ಉತ್ಕರ್ಷಕ್ಕೆ ಕಡೆಯ ಎಲ್ಲೆಯಾಗಿರುವ ಮತ್ತು ಯಾವಾತನ ಪಾದಗಳು ಇಹ ಪರಗಳೆರಡರಲ್ಲೂ ಸರ್ವದಾ ನನಗೆ ಗತಿಯಾಗಿವೆಯೋ ಅಂತಹ ನನ್ನ ಸ್ವಾಮಿಯಾದ ರಂಗನಾದ ಎಂಬ ಹೆಸರುಳ್ಳ ನಾದ ಮುನಿಗಳಿಗೆ ನಮಸ್ಕಾರ

ವಿಶೇಷಾರ್ಥ ತಸ್ಮೈನಮ ಅಂದರ ಆ ಮಹಾನುಭಾವರಿಗೆ ವಿಧೇಯನಾಗಿರುವುದು ತನ್ನ ಆತನ ಸ್ವಭಾವ ಅವರ ನೋಟ, ನಡೆ ತನ್ನನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕು ಆಗ ತಾನು ತದೀಯ, ಅವರ ಛಾಯೆ, ಪಾದರೇಖೆ, ಅವರನ್ನು ಬಿಟ್ಟು ಬೇರೊಬ್ಬರ ಛಾಯೆ ಆಗುವುದಿಲ್ಲ ಇದು ನೋಟ ಅಂತೆಯೇ ಅವರ ರಕ್ಷಣೆಗೆ ಒಳಪ ಡದೆ ಮತ್ತೊಂದು ನೆರವನ್ನು ಮನಸ್ಸಿನಲ್ಲಿ ಉಳಿಸಿ ಕೊಳ್ಳುವುದಿಲ್ಲ ಇದನ್ನು ರಾಮಾನುಜಾಚಾರ್ಯರು ಮತ್ತು ಮನವಾಳ ಮಹಾಮುನಿಗಳ ಶಿಷ್ಯರ ಸ್ವಭಾ ವದಿಂದ ಮನಗಾಣಬಹುದು ಎಂಬಾರ್ ಎನ್ನು ವರು ರಾಮಾನುಜಾಚಾರ್ಯರ ಬಂಧು ಮತ್ತು ಶಿಷ್ಯರು ಅವರ ವಿಷಯವಾಗಿ ತಿಳಿವಳಿಕೆ ನೀಡುವ ಪರಾಶರ ಭಟ್ಟರು 'ರಾಮಾನುಜ ಪದಛಾಯಾ' ಎಂದು ಹೊಗಳಿದ್ದಾರೆ ಅಂದರೆ ಕರ್ಮಮಾರ್ಗ ದರ್ಶಿ ರಾಮಾನುಜರಲ್ಲದೆ ಮತ್ತೊಂದಿಲ್ಲ ಇದು ವ್ಯಕ್ತಿ ವಿಷಯ, ಆಶ್ರಯ ಅಂತಯೇ ವಾನಮಾ ಮಲೆ ಪ್ರಥಮ ಜೀಯರ್ ರಾಮಾನುಜ ಎಂಬ ಹೆಸರು ಇಟ್ಟುಕೊಂಡವರು ಇವರು 'ರಮ್ಯಜಾಮಾ ತೃಯೋಗೀಂದ್ರರಾಗಿದ್ದಾರೆ ಅಂದರ ಅವರ ಶಿಷ್ಯ ರಾಗಿ ತಾನು ಪ್ರಯಾಣಮಾಡುತ್ತಿಲ್ಲ ಅವರ ಪಾದ ದಲ್ಲಿ ತೋರುವಗೆರೆ ಅವರು ಹೋದೆಡೆಯೆಲ್ಲಾ ತಾನೂ ಚಲಿಸುತ್ತದೆ ಇದಕ್ಕೆ ಕಾರಣ ಪಾದ ದಲ್ಲಿ ರೇಖೆಯಾಗಿರುವುದು ಅಂದಮೇಲೆ ಫಲ ಪ್ರಾಪ್ತಿಗೆ ಆಚಾರ್ಯಪ್ರಯತ್ನ ಸಾಕು ಪದಛಾಯೆ ಆಶ್ರಯವಾದರೆ ಆ ಪಾದವೇ ಉತ್ತಾರಕವಾಗುತ್ತದೆ ಎಂಬ ನಾರಾಯಣ ಶಬ್ದದಲ್ಲಿ ಅಯನ ಪದವಲ್ಲಿ ತೋರುವ ಆಶ್ರಯತ್ವ ಮತ್ತು ರಕ್ಷಕತ್ವ ಸ್ಪಷ್ಟವಾಗಿ ತೋರುತ್ತದೆ ಇದು ಎಲ್ಲರಿಗೂ ಸಾದಾರಣವಾ ದರೂ ಅದು ಪೂರ್ಣ ಚಂದ್ರನಂತೆ ಕಾಣಿಸಿಕೊ ಳ್ಳುವುದು ಈ ಪ್ರಪಂಚದಲ್ಲಿ ಒಂದೆರಡು ವ್ಯಕ್ತಿಗಳಲ್ಲಿ ಮಾತ್ರ ಅಂದವರು ಅಸಾದಾರಣವಾಗಿ ಉಜ್ಜೀ ವನಕಾರಕರಾಗುತ್ತಾರೆ ಅಂದವರಲ್ಲಿ ಮದುರಕವಿ ಗಳಂತೆ ನಾದಮುನಿಗಳೂ ಒಬ್ಬರು ಈ ಮಹಿಮೆ ಯುಳ್ಳ ನಾದಮುನಿಗೆ ತಾನು ಛಾಯೆಯಾಗಿಯೂ ರೇಖೆಯಾಗಿಯೂ ಆಗುವುದಾಗಿ ಯಾಮುನಾಚಾ ರ್ಯರು ಬಗೆಯುತ್ತಾರೆ

ಕಾಪಟ್ಯವು ಸ್ವರೂಪನಾಶಕ ಅದು ಅಭ್ಯಾಸ ವಾಗಿ ಉಳಿದುಕೊಳ್ಳಕೂಡದು ಕಪಟಿಗಳಿಗೆ ತುತ್ತಾ ಗದೆ ಕಾಮದ್ವಂಸಿಯಾದ ಶಂಕರನಂತೆ, ಕಾಪಟ್ಯವಿ ನಾಶಕನಾದ ಕೃಷ್ಣನ ಪಾದಕಮಲಗಳ ತತ್ವಜ್ಞಾನ ನಿಜವಾದ ತಿಳಿವು. ಆ ಜ್ಞಾನದ ಮೇಲೆ ಅನು ರಾಗ ವಿರಬೇಕು ಅವನ್ನು ಮರೆಯದಿರಬೇಕು ಇಂತಹ ಸ್ಥಿತಿಯಿಲ್ಲಿರುವವರ ಹಿರಿಮೆ ಅನೇಕರಲ್ಲಿ ತೋರಿದರೂ ಅದು ತಾತ್ಕಾಲಿಕವಾಗಿರಬಹುದು ನಾದಮುನಿಗಳಲ್ಲಿ ಇದು ಅತಿಶಯಿತವಾಗಿದೆ ಇತ ರರಲ್ಲಿ ಈ ಮಹಿಮೆ ಕಾಣಲಾಗದು ಒಂದು ವೇಳೆ ಔಪಚಾರಿಕವಾಗಿ ಇತರರಲ್ಲಿ ಕಂಡರೂ ಇವರಲ್ಲಿ ಉಳಿದುಕೊಂಡಿರುವುದು ಕೊನೆಯದಾದ ಎಲ್ಲೆ ಇವರಿಗೆ ಸಮಾನವಾಗಿ ಇತರರು ತೋರಿ ದರೂ ಈ ಮಟ್ಟದಲ್ಲಿ ಮತ್ತಾರೂ ಉಳಿದುಕೊ ಳ್ಳಲು ಸಾಧ್ಯವಿಲ್ಲ ಆದ್ದರಿಂದ ವೇದಾಂತ ಪರಿ ಚಯಕ್ಕೆ ಉಪಯುಕ್ತವಾದ ಬ್ರಾಹ್ಮಣ ಶ್ರೇಣಿಯವ ರಾದರೂ ಇವರ ಪ್ರಭಾವ ಅಪ್ರತಿಮವಾದುದು ಆದ್ದರಿಂದ ಅವರು ಎಲ್ಲ ವಿದದಲ್ಲಿ ತನಗೆ ಒಡೆ ಯರು ನಾದಮುನಿ ಎಂಬ ನಾಮಾಂಕಿತರು ಅವರನ್ನು ಬಿಟ್ಟು ಮತ್ತೊಂದನ್ನು ಉತ್ತಾರಕವಾಗಿ ತಾನು ಬಳಸುವುದಿಲ್ಲ ಕಳವಳಕ್ಕೆ ಆಸ್ಪದವಾದ ಬೂಲೋಕ ಮತ್ತು ನಿರಾಂತಕವಾದ ಪರದಲ್ಲೂ ಅಂದರೆ ಸರ್ವತ್ರ, ಸರ್ವದಾ, ಸರ್ವದಾ ಏಕ ಪ್ರಕಾ ರವಾಗಿ ಅವರಪಾದಗಳು ವಶಕ್ಕೆ ತಗೆದುಕೊಂಡಿ ರುವ ಸಾಮರ್ಥ್ಯವುಳ್ಳವು. ತನ್ನ ಉದ್ಧಾರಕ್ಕಾಗಿ ಮಾತ್ರ ವರ್ತಿಸುತ್ತವೆ ಅಂದರ ಅತ್ಯಂತ ನಿಹೀನನಾದ ತನ್ನನ್ನೂ ಕೈಬಿಡದೆ ಉನ್ನತ ಮಟ್ಟದಲ್ಲಿ ಉಳಿಸಿಕೊ ಳ್ಳುವುದಕ್ಕಾಗಿ ತನಗಾಗಿ ಮೀಸಲಾಗಿರುವ ಪಿತಾಮ ಹರ ಪಾದಾರವಿಂದ ಆದ್ದರಿಂದ ತನಗೆ ಬೇಸರಕ್ಕೆ ಎಳ್ಳಷ್ಟೂ ಅವಕಾಶವಿಲ್ಲ ಅಂದರೆ ಪರಮಪದದಲ್ಲಿ ರುವಂತೆ ಇಲ್ಲೂ ತನಗೆ ರಕ್ಷಕವಾಗಿವೆ

ವ್ಯಕ್ತಿ, ಅಂಗ, ಅವದಾರಣೆ ಮತ್ತು ರಕ್ಷಕತ್ವ ನಿಮಿ ತ್ತವಾದ ಪೋಷಕವಸ್ತು ಎಂಬ ಪರಾಂಕುಶ ಸದೃ ಶರಾದ ನಾದಮುನಿಗಳ ವಿಷಯದಲ್ಲಿ ಸಂಬಂದ ಜ್ಞಾನದ ನಿಮಿತ್ತವಾಗಿ ತಮಗೆ ಒದಗಿದ ಅದ್ಭುತ ಸ್ಥಿತಿಯ ನೆನಪಿನಲ್ಲಿ ಆಚಾರ್ಯರನ್ನು ಲೋಕ ತಿಳಿ ಯುವಂತೆ ಮನೋವಾಕ್ಕಾಯಗಳಿಂದ ಹೊಗಳಿ ಸ್ವದ್ಯೇಯ ನಿಷ್ಠೆಗಳನ್ನು ಯಾಮುನಾಚಾರ್ಯರು ಪ್ರಕಾಶಪಡಿಸುತ್ತಾರೆ *

# ದ್ರಮಿಡೋಪನಿಷತ್ ಸಂಗ್ರಹ

(ಹಿಂದಿನ ಸಂಚಿಕೆಯಿಂದ) (ತಿರುವಾಯ್‌ಮೊಳಿಸಾರ) ಕಂದಾಡೈಕೇಶವನ್

ಕರುಮಾಣಿಕ್ಕಮಲೈ

ಅನ್ಯಾರ್ಹತಾ ಶ್ರವಣ ಮಪಿವ ಶೇಷತಾಯಾ
ಸ್ಸೋಢುಂ ನ ಶಕ್ನುತ ಇತಿ ಸ್ವವಶಾವಿಶೇಷಂ
ಅನಾಪವಶಮವದಂಬ್ಯ ತಮೂ ಪಯುಕ್ತಂ
ನಾರಾಯಣೈಕ ಪರದೀರ್ಣವಮ ಜಗಾದ

ಕರುಮಾಣಿಕ್ಕಮಲೈ ಎಂಬುವ ದಶಕದಲ್ಲಿ ನಮ್ಮಾಳ್ವಾರರು ನಾರಾಯಣನ ವಿಷಯವಾದ ಶೇಷತ್ವಾದವಸಾಯಿವ್ಯವರಾಗಿ ಇತರ ಶೇಷತ್ವವೆಂಬ ಮಾತಿನ ಶ್ರವಣವೂ ಕೂಡ ಬಹಳ ಅಸಹವಾದ ತಮ್ಮ ಅವಸ್ಥಾಪರಿಪಾಕವನ್ನು ಒಬ್ಬ ನಾಯಿಕೆಯ ಅವಸ್ಥೆಯನ್ನವಲಂಬಿಸಿ ಉಪದೇಶ ಕೊಟ್ಟರು

ನೆಡುಮಾಲ್

ತಾಂ ಶೇಷತಾಮುಪ ತದಿ ಯ ತದಿಯ ಸೀಮಾ
ಶೇ ಷತ್ವ ಪರ್ಯವಸಿತಾಂ ಪುರುಷಾರ್ಥ ಸೀಮಾಮ್
ಆವಿಷ್ಕೃತಾಂ ಭಗವತಾ ಮುನಿರಾತ್ತರುಚ್ಯಾ
ಮಾಚಷ್ಟ ದಿಕ್ಕೃತ ತದನ್ಯಪುಮರ್ಥಮನ್ಯ ||

ನಡುಮಾಲ್ ಕಡಿಮ ಎಂಬುವ ದಶಕದಲ್ಲಿ ನಮ್ಮಾಳ್ವಾರರು ಭಗವತ್ ಪ್ರಸಾದದಿಂದ ತಾವು ಸಾಕ್ಷಾತ್ಕರಿಸಿ ತಮಗೆ ಅತಂತಾಬಿಮತವಾದ ಆ ಭಗವಚ್ಛೇಷತ್ವವನ್ನು ಅಷ್ಟರಲ್ಲೆ ನಿಲ್ಲಿಸದ ಭಗವದ್ದಾಸ ದಾಸರಲ್ಲಿ ಕೊನೆಯ ದಾಸರಾದ ಶ್ರೀ ವೈಷ್ಣವರಿಗೆ ಶೇಷರಾಗಿರುವಂತ ಅನುಷ್ಠಿಸಬೇಕು ಇಂಥಾ ಅನುಷ್ಠಾನವೆ ಪುರುಷಾರ್ಥದ ಚರಮಾವಧಿ ಇದರ ಮುಂದೆ ತದಿತರ ಪುರುಷಾರ್ಥಗಳು ಪುರುಷಾರ್ಥಗಳೆ ಅಲ್ಲವೆಂಬುವುದಾಗಿ ಹೇಳಿದರು

ಕೊಂಡಪೆಂಡಿರ್

ಅದ್ಯ ಚಕಾರ ನವಮ ಶತಕ ಶರಾರಿ
ತಚ್ಛೇಷತಾನುಭವ ಸನ್ತತಿ ಸಮ್ಮತೈನ
ನಿಶ್ಚಿತ್ಯ ಸರ್ವವಿದ ಬಂಧುತಯಾ ತಮೀಶ
ಮಾಪತ್ಸಖಂ ಪ್ರಣಮತ ತಿ ಪರೋ ಪದೇಶಂ ||

ಕೊಂಡ ಪೆಂಡಿರ್ ಎಂಬುವ ದಶಕದಲ್ಲಿ ಆಳ್ವಾರರು ಭಗವಚ್ಛೇಷತ್ವಾನುಭವವನ್ನೇ ಪರಮ ಪುರುಷಾರ್ಥವಾಗಿ ಅಧ್ಯವಸಿದ ಭಾಗವತರ ಅಭಿಪ್ರಾಯವನ್ನು ಅನುಸರಿಸಿ ಲೌಕಿಕದ ಜನರನ್ನು ಕುರಿತು "ಎಲೆ, ಪಾಮರರೇ, ನೀವು ಬಂಧುಗಳೆಂದೂ, ರಕ್ಷಕರೆಂದೂ ತಿಳಿದ ಕೆಂಡತಿ ಮಕ್ಕಳು ಒಂದು ಕಾರಣದಿಂದ ಬಂಧುಗಳಾಗಿ ಆ (ದೇಹಾದಿ) ಉಪಾದಿ (ಕಾರಣ) ಇರುವವರಗೂ ಬಂಧುಗಳಾಗಿ ನಟಿಸಿ ಆಪತ್ತಿನಲ್ಲಿ ಉಪೇಕ್ಷೆ ಮಾಡುವರು ಸರ್ವೇಶ್ವರನು ಹಾಗಲ್ಲದ ನಿರುಪಾದಿಕ ಸಕಲವಿದ ಬಂಧುವಾಗಿದ್ದಾನೆ ವಿಮರ್ಶೆ ಮಾಡಿ ನಿಶ್ಚಯ ಮಾಡಿ ಕೊಂಡು ಇತರರನ್ನು ಬಿಟ್ಟು ಅಂಥಾ ಸರ್ವೇಶ್ವರನನ್ನು ಆಶ್ರಯಿಸಿರಿ ಎಂದು ಉಪದೇಶಿಸುತ್ತಾರೆ

ಪಂಡೈನಾಳ್

ಬಂಧುತ್ವತಸ್ತಮನು ಕಂಪಿತ ವಸ್ತ ಮಾಪ
ದಾಪನ್ನವಾಮ್ನಿ ಭುಜಗಾಧಿಪತೌ ಶಯಾನಂ
ಸ್ವಾಪ ಕ್ತಿತಂ ಮುನಿರಯಾಚತ ತಂ ದ್ವಿತೀಯ
ತಸ್ಯೈಕ ರೂಪ ಶಯಿನ ಸ್ಥ ಚ ಮ ಖಿತೂ ಸ್ಥೂತ್ ||

"ಪಂಡೈ ನಾಳಾಲೇ ಎಂಬುವ ದಶಕದಲ್ಲಿ ನಮ್ಮಾಳ್ವಾರರು ಮಗ ಸಕಲ ವಿದ ಬಂಧುವಾಗಿ ಮೊದಲಿಂದ ತಮ್ಮಲ್ಲಿ ಕೃಪೆಮಾಡಿ, ತಿರುಪ್ಪುಳಿಂಗುಡಿ ಎಂಬ ದಿವ್ಯದೇಶದಲ್ಲಿ ಆದಿಶೇಷನ ಮೇಲೆ ಮಲಗಿರುವ ಸರ್ವೇಶ್ವರನಲ್ಲಿ ತಮ್ಮ ಅಭೀಷ್ಟವನ್ನು ಯಾಚಿಸಿದರು ಆಗತೇ ಚಲಿಸದ ಚಿರಕಾಲವಾಗಿ ಒಂದೇರೀತಿಯಾಗಿ ಮಲಗಿರುವುದನ್ನು ನೋಡಿದೆ ಹವ್ಯ ಆಯಾಸಗೊಳ್ಳುವುದೆ ಎಂದು ಪ್ರೇಮವಶರಾಗಿ ಮ ಖಿತರಾದರು

ಓರಾಯಿರಂ

ನಾರಾಯಣೇ ಮಯಿ ಸತಿ ಸ್ವಬರಾರ್ಥಚಿಂತಾ
ನಾರ್ಹಾ ತವೇತಿ ವಿಭುನಾ ಬಹುಮಾನಭಾಜಾ
ಆವಿಷ್ಕೃತಾನ್ನಿರವದಿನ್ನಿಜಶೀಲವತ್ತಾಂ
ಅನ್ಯಾದೃತೀ ಮನುಬಭೂವ ಮುನಿಸ್ತೃತಿ ಯ ||

ಓರಾಯಿರಂ ಎಂಬುವ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನು ನಿಮ್ಮ ರಕ್ಷಣೆ ವಿಷಯದಲ್ಲಿ ನೀವು ವಿಚಾರಿಸಕೂಡದು ನಿಮಗೆ ಸಕಲವಿದ ಬಂಧುವಾದ ನಾನೇ ನಿಮ್ಮ ರಕ್ಷಣೆಯನ್ನು ವಹಿಸುವನು ಎಂಬುವುದಾಗಿ ಹೇಳಿ ತಾನು ಪ್ರದರ್ಶಿಸಿದ ಅತಿ ವಿಲಕ್ಷಣವಾದ ನಿರವದಿಕವಾದ ಸೌಶೀಲ್ಯವನ್ನು ಅನುಭವಿಸಿದರು

ಮಾಯಾರ್

ಶೀಲಾದಿಕ ಶ್ರೀಯ ಮುರ ಸ್ಥಲತೋ ದದಾನ
ಅಪ್ಯಾತ್ಮಸ್ತಸ್ತಂ ನ ದಿಶತೀತ್ಯತಿಮಾತ್ರಖಿನ್ನ
ಲಬ್ಧ್ವಾ ತತ ಕಮಪಿ ತಸ್ಯ ಕೃಪಾಕಟಾಕ್ಷಂ
ಅದ್ಯಾಕ್ಷಮೀಶಮಿತಿ ಸ ಪ್ರಜಹರ್ಷ ತುರ್ಯೇ

ಮ ಯಾರ್ ಎಂಬ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನು ಸಕಲ ಗುಣ ಸಂಪನ್ನನಾದ ಪುರುಷಾಕಾರಭೂತ ನಾದ ಶ್ರೀ ದ ವಿಯನ್ನು ತನ ವಕ್ಷಸ್ಥಳದಲ್ಲಿ ಧರಿಸಿದರೂ, ನನ್ನ ಅಬಿ ಷವನು ನರವ ರಿಸದ ಇದ್ದಾ ನಲ್ಲ ಎಂಬುವುದಾಗಿ ದು ಖಪಟ್ಟು ತರುವಾಯ ಆ ಸರ್ವೇಶ್ವರನ ಕಟಾಕ್ಷವನ್ನು ಹೊಂದಿ ನಾನಿ ಗ ಆ ಸರ್ವ ಶ್ವರನ ಕೃಪಾ ಟಾಕ್ಷ ವನ್ನು ಹೊಂದಿ ಆತನನ್ನು ಸಾಕ್ಷಾತ್ಕರಿಸಿದ ಎಂದು ಸಂತುಷ್ಟರಾದರು

ಇನ್ನುಯಿರ್

ಆಲೂ ಕನಂ ಚ ತವಚಾಕ್ಷುಷ ಮಿತ್ಯವಾಪ್ತೋ
ದೃಷ್ಟ್ವಾ ಚ ತತ್ ಸ್ಮರಣ ಹೇತುಪದಾರ್ಥಜಾತಂ
ಆಸನ್ನಹಾನಿಕತಯಾ ಅವಸತಸ್ಸುಸಕ್ತೋ
ದು ಖ ನ ದುಸ್ಸಹತರೇಣ ಸ ಪಂಚಮೇ ಭೂತ್ ||

ಇನ್ನುಯಿರ್ ಎಂಬ ದಶಕದಲ್ಲಿ ನಮ್ಮಾಳ್ವಾರರು ಹಿಂದಿನ ದಶಕದಲ್ಲಿ ತಾವು ಮಾನಸಿಕವಾಗಿ ಅನುಭವಿಸಿದ ಸರ್ವ ಶ್ವರನನ್ನು ಪ್ರತ್ಯಕ್ಷವಾಗಿ ಅನುಭವಿಸಲು ಆಶಪಟ್ಟು ಅದು ಲಭಿಸದ ಬಹಳ ಆರ್ತರಾಗಿ ಅದರ ದು ತ ರೂಪಗುಣ ಚೇಷ್ಟಿತಗಳಿಂದ ಆ ಸರ್ವೇಶ್ವರನಿಗೆ ಸ್ಮಾರಕಗಳಾದ ಕೂ ಗಿಲ ಮುಂತಾದ ಪಕ್ಷಿಗಳನ್ನು ನೋಡಿ ತಡೆಯಿದ ದುಖಾ ತಿರೇಕ ದಿಂದ ಶರಿ ರ ವಿಯೋ ಗ ಉಂಟಾಗುವುದೇ ಎಂಬಂತ ಅತ್ಯಂತ ದು ದಿಲ್ಯ ವನ್ನು ಹೊಂದಿದರು

ಉರು ಕುಮಾಲ್

ಸ್ವಸಾತತ್ರಾಮುಗಣರ್ಯ್ಯ ಸ್ವಯಿಮರ್ದಯಿತ್ವಾ
ಸ್ವಂ ಪ್ರಾಪಹರ್ಷವಿವಶೋ ಹರಿ ರಿತ್ಯವಸ್ಥಾತ್
ಯಿಚ್ಛೆ ಲ ಮನ್ವಚವತ್ ಅಸ್ಯ ತವೆ ವ ದ ವಾತ್
ಸಂಸ್ಮೃತ್ಯ ಸ ಮ್ಲತಮನಾ ವ್ಯಸನಿ ಚ ಷಷೇ ||

ಉರುಕುಮಾಲ್' ಎಂಬ ತಿರುವಾಯ್ ಮೊಳಿಯಲ್ಲಿ ನದ್ಮಾಳ್ವಾ ರರು ಸರ್ವೇಶ್ವರನು ತಾನು ಸಕಲಾಂತರ್ಯಾಮಿಯಾಗಿ ಇದ್ದರೂ ಅವನ್ನು ಒಂದು ಅದಿಕವಾಗಿ ತಿಳಿಯದೇ ತಮನ್ನು ಪ್ರಾರ್ಥಿಸಿ ತಮ್ಮ ಹೃದಯದಲ್ಲಿ ಪ್ರವೇಶಿಸಿ ಹರ್ಷ ಪರವಶನಾದ ಆತನ ಸೌಶೀಲ್ಯವನ್ನು 'ಇರುತ್ತುಂ ವಿಯಿಂದು' ಎಂಬುವ ತಿರು ಮೊಳಿಯಿಲ್ಲಿ ತಾವು ಅನುಭವಿಸಿದ ಪ್ರಕಾರ ಈಗ ಪರಾತ್ತಾಗಿ ಸ್ಮರಿಸಿ ವಿಲಾಂತ ಕರಣರಾ ದರು

ಎಂಗಾನುಲ್

ಸ್ವಯಿಂ ವಿಯೋಗಿಜನ ಹಂತ್ಯ ನಿಜಾಬಿರೂಪ್ಯಂ
ವಿಸ್ಮೃತ್ಯ ಸಂಶ್ರಿತಜನ್ಯವ್ಯಸತಸ್ಸಹೃದ
ಅರ್ಚಾ ಹರೇ ಕ್ವಚನ ತತ್ರ್ಯತಿಮೂವನಾಯಿ
ಮೂರು ಚಕಾರ ವಿಹಗಾನದಿ ಸಪ್ತಮಂ ಸ

ಈ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನು ತನ್ನೊಡನ ವಿಶ್ಲೇಷಿ ಸಿದವರನ್ನು ತನ್ನ ಸೌಂದರ್ಯವನ್ನು ನನದು ದು ಖಿಸುದರಂದು ತಿಳಿ ಯದೇ, ಹಲವು ಆಶಿತರ ಸಂಗಡ ತಿರುಮೂಳಿಕ್ಕಳ್ ಎಂಬ ದಿವ ದೇಶ ದಲ್ಲಿ ನೆಲಸಿರುವ ಸರ್ವೇಶ್ವರನನ್ನು ಪತ್ತಿರಕ್ಕ ಆತನನ್ನು ಅಗಲಿದ ಆಳ್ವಾ ರರು ಆತನ ಸೌಂದರ್ಯವನ್ನು ನನದು ವಿರಹವನ್ನು ತಡಯಿಲಾರದ ಆತನಿಗೆ ಪಕ್ಷಿಗಳನ್ನು ದೂತರಾಗಿ ಕಳುಹಿಸಿದರು

ಅರುಕ್ಕುಂ

ಈಶೇ ಸಮಾಜಿಗಮಿಹತ್ಯು ದೂತವಾಕ್ಯೈ
ತಾವದ್ವಿಲಂಬ ಮಸಹನ್ನುನಿರಸ್ಯ ಬೌಮಂ
ದೇವೀಜುಷ ಕಮಪಿ ದೇಶವಿಶೇಷಂ ಆರಾತ್
ಯಾಯಿಾಂ ಕದೇತ್ಯವದಿ ಮಾರ್ದಯಿ ದಷ್ಟಮೇನ

ಈ ದಶಕದಲ್ಲಿ ನಮ್ಮಾಳ್ವಾರರು ಹಿಂದೆ ತಾವು ಕಳುಹಿಸಿದ ದೂತರು ಹೋಗಿ ಬಿನ್ನೈಸಿದ ತಮ್ಮ ಅವಸ್ಥೆಯನ್ನು ಕೇಳಿ ತಮ್ಮ ಪತ್ತಿರಕ್ಕ ಬರಲು ಈಶ್ವರನು ಸನ್ನದ್ಧನಾಗಿರಲು ತಾವು ಅಷ್ಟುಮಾತ್ರ ಕಾಲವಿಲಂಬ ವನ್ನು ಸಹಿಸದೇ ಪುರುಷಕಾರಭೂತರಾದ ಶ್ರೀ ಭೂದೇವಿಯರೊಡನ ಬಂದು ಬಿಜಯಮಾಡಿಸುವ ತಿರುನಾವಾಯ್ ಎಂಬ ದಿವ್ಯ ದೇಶವನ್ನು ನಾನು ಯಾವಾಗ ಸಮೀಪಿಸುವೆನೋ ಎಂಬುವುದಾಗಿ ಪ್ರಾರ್ದಿಸುತ್ತಿದ್ದಾರ

ಮಲ್ಲಿಕೈ

ಸ್ವಪ್ರಾಪ್ತ ಕಾಲಂ ಅವಿಬಾವಯಿತಿ ಇಂದಿರೇಶೇ
ಕೃಷ್ಣೇ ಗವಾಂ ಅವನ ದರ್ಮಿಣ ಗೋಪಿಕಾನಾಂ
ಸಾಯಿಂ ಸಮಾಗಮ ವಿಲಂಬಿನಿ ಯೋಽವಸಾದ
ಆನೀತ್ಸ ಏವ ನವಮೇ ಸ್ಫುರಿತಶ್ಶರಾರೇ

ನಮ್ಮಾಳ್ವಾರರು ಹಿಂದಿನ ದಶಕದಲ್ಲ ತಾವು ಪ್ರಾರ್ದಿಸಿದ ಬಗವತ್ ಪ್ರಾಪ್ತಿ ವಿಷಯಿಕವಾದ ಕಾಲವು ಆಗಲೇ ಪರಿಸದೇ ಹೋದದ್ದರಿಂದ ಸರ್ವೇಶ್ವರನು ಬಂದು ಆ ಬಗವತ್ ಪ್ರಾಪ್ತಿ ಕಾಲವನ್ನು ವಿಶದ ಪಡಿಸದೆ ಹೋದದ್ದರಿಂದಲೂ ಬಹಳವಾಗಿ ದು ಖಪಟ್ಟು ಗೋವುಗ ಳನ್ನು ಮೇಯಿಸಲು ಹೋದ ಶ್ರೀಕೃಷ್ಣನು ಸಾಯಿಂಕಾಲದಲ್ಲಿ ಹಿಂದಿ ರುಗಿ ಬಾರದೇ ಹೂ ದದರಿಂದ ಆ ಗೋಕುಲದಲ್ಲಿದ್ದ ಗೋಪಿಯರು ಅನುಬವಿಸಿದ ದು ಖವನ್ನು ಈ ಮಲ್ಲಿಗ್ಯ ಎಂಬ ದಶಕದಲ್ಲಿ ತಾವು ಅನು ಬವಿಸಿದರು

ಮಾಲ್ಯನಣ

ಪ್ರಾಪ್ತಿ ಪ್ರದಾನ ಸಮಯೋಯಿ ಮಿತಿ ಪ್ರಕಾಶ್ಯ
ಸ್ವಸ್ಯ ಪ್ರಿಯಿಂ ಮಹತಿ ಕೃಷ್ಣಪುರೇ ವಸಂತಂ
ಈಶಂ ಯಿದಾ ಶಕನ ಮಾಶ್ರಯಿತೇತಿ ಹರ್ಷಾತ್
ಅನ್ಯೋಪದೇಶ ಮಕರೋದ್ವಶಮೇ ಮುನೀಂದ್ರ

ಈ ಮಾಲೈನಣ್ಣ ಎಂಬುವ ದಶಕದಲ್ಲಿ ನಮ್ಮಾಳ್ವಾರರು ತಮಗ ಸರ್ವೇ ಶ್ವರನು ತನ್ನ ಪ್ರಾಪ್ತಿ ಕಾಲವನ್ನು 'ನೀವು ನನ್ನನ್ನು ಈ ಶರೀರಾವಸಾನದಲ್ಲಿ ಹೊಂದುವಿರಿ' ಎಂಬುವುದಾಗಿ ತಿಳಿಸಲು ಅದರಿಂದ ಬಹಳ ಸಂತೋ ಷಗೊಂಡು ಚೇತನರನ್ನು ಕುರಿತು ನೀವೆಲ್ಲರೂ ತಿರುಕ್ಕಣ್ಣಪುರದಲ್ಲಿ ಬಿಜ

ಯಿಮಾಡಿರುವ ಒಕ್ಕಲ್ಪಿಯಿನಾವ ಈಶ್ವರನನ್ನು ಆಶ್ರಯಿಸಿ ಮುಕ್ತಿಯನು ಹೊಂದಿ ಎಂಬುವುದಾಗಿ ಉಪದೇಶಿಸಿದರು

ತಾಳಿತಾಮರ

ಆದ್ಯೇ ನ್ತಿಮಸ ಶತಕಸ್ಯ ಮುನಿಸ್ಸ್ವಯಾತ್ಮಾಂ
ನಿಶ್ಚಿತ್ಯ ವರ್ತ್ಮನಿ ಸಹಾಯ ಮಪ ಸ್ಮಾಗ
ಆಪ್ತಂ ಹಿತಜ್ಞಂ ಅಹಿತಚ್ಛಿದಮಂಬುಜಾಕಂ
ಮೋಹೋರದಿ ಶ ಮುರದ್ವರಿಣ ಮಾಶ್ರಯತ್ನ

ತಾಳ ತಾಮರೈ ಎಂಬುವುದರ ದಶಕದಲ್ಲಿ ನಮ್ಮಾಳ್ವಾರರು ತಾವು ಶೀಘ್ರವಾಗಿಯೆ ಪರಮಪದಕ್ಕೆ ಹೋಗಲು ನಿಶ್ಚಯಿಸಿ ದಾರಿಯಲ್ಲಿರುವ ಪ್ರತಿಬಂಧಕಗಳಿಗೆ ಬಯಪಟ್ಟವರಾಗಿ ಅದನ್ನು ತಿಳಿಮ ಹೊ ಗಲಾಡಿ ಸಲು ಸಮರ್ದನೂ ಹಿತವನ್ನು ತಿಳಿಮ ಕೃಪಮಾಡುವವನೂ ಪರಮ ಆಪ್ತನೂ ಆದ "ತಿರುಮೋಹೂರ್ ಎಂಬ ದಿವ್ಯದೇಶದಲ್ಲಿ ಬಿಜಯ ಮಾಡಿರುವ ಪುಂಡರೀಕಾಕ್ಷನಾದ ಶ್ರಿ ಕೃಷ್ಣನನ್ನು ಆಶ್ರಯಿಸಿದರು

ಕಡುಮಿಡರ್

ವೈಕುಂಠಮೇತ್ಯ ಕರಣೀಯ ಮಶೇಷ ದಾಸ್ಯಂ
ಅತ್ರೈವ ಕೇವಲ ಮನಂತಪುರೇ ವಿದಿತ್ವ
ಪ್ರಾಪ್ಯತ್ವಮಸ್ಯ ದುರಿತೌಘ ನಿವರ್ತನಂ ಚ
ಪ್ರಾಚೀಕಶತ್ ತನುಭೃತಾಂ ಶಠಜಿತ್ ದ್ವಿತೀಯೇ

"ಕೆಡುಮಿಡರ್" ಎಂಬ ದಶಕದಲ್ಲಿ ನಮ್ಮಾಳ್ವಾರರು ತಾವು ಪರಮಪ ದಕ್ಕೆ ದಯಮಾಡಿಸಿ ಅಲ್ಲಿ ಪರಮಾತ್ಮನ ಪಾದ ಕಮಲಗಳಲ್ಲಿ ಮಾಡತಕ ಸಕಲವಿದ ಕೈಂಕರ್ಯಗಳನ್ನು ಈ ಲೀಲಾ ವಿಭೂತಿಯಲ್ಲಿ ತಿರುವನಂತ ಪುರದಲ್ಲಿರುವ ಅನಂತಪದ್ಮನಾಬನ ಚರಣಾರವಿಂದಗಳಲ್ಲೇ ಮಾಡಲು ದ್ದೇಶಿಸಿ ಲೋಕದ ಜನರಿಗೂ ಈ ಅನಂತಪದ್ಮನಾಬನೇ ಪ್ರಾಪ್ಯಭೂ ತನೂ ಸಕಲ ಪ್ರತಿಬಂದಕ ನಿವರ್ತಕನೂ ಎಂದು ಉಪದೇಶಿಸಿದರು

ವೇಯ್‌ಮರು

ಗೋಪೀ ವಿಮುಕ್ತ ಮಪಿ ಗೋಚಪಲಂ ವಿಮುಕ್ತಂ
ದಾಸ್ಯಂತಮಪ್ಯಚರಮೇನ ಪರಿಂ ನಿಜೇಷ್ಟಂ
ಸ್ವೋಪೇಕ್ಷಿತಂ ತಮತಿಶಂಕ್ಯ ಮುನಿಸ ತ ಸ
ವಿಸ್ರಂಬಿತೋ ವಿಪುಲತೃಷ್ಣತಯಾ ತೃತೀಯೇ

"ವೇಯ್‌ಮರು ತೋಳಿಣೈ' ಎಂಬುವ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನು ತಮ್ಮ ಅಭೀಷ್ಟವವನ್ನು ಕೃಪೆಮಾಡಲು ಸನ್ನದ್ಧನಾಗಿ ಇರೂ ಅದು ಆಗಲೇ ಲಬಿಸದೇ ಅತ್ಯಂತ ಆರ್ತರಾಗಿ ಒಬ್ಬ ಗೋಪಿಕೆಯ ಅವಸ್ಥೆಯನ್ನು ಹೊಂದಿ ಆ ಗೋಪಿಕೆಯ ಶ್ರೀಕೃಷ್ಣನು ತನ್ನೊಡನೆ ಸೇರಿ ರುವಾಗಲೇ ಪ್ರಾತ ಕಾಲದಲ್ಲಿ ಗೋವುಗಳನ್ನು ಮೇಯಿಸಲು ಹೋಗು ವನೆಂದು ಬಗದು "ಇನ್ನು ನೀನು ನನ್ನನ್ನು ಉಪೇಕ್ಷಮಾಡುವಿ' ಎಂದು ಅವನಲ್ಲಿ ಅತಿಶಂಕೆಯನ್ನು ಮಾಡಿದಾಗ ಆ ಗೋಪಿಕೆಯನ್ನು ಶ್ರೀಕೃಷ್ಣನು ಸಮಾದಾನ ಮಾಡಿದಂತ ತನ್ನನ್ನು ಸ್ವಾಮಿ ಸಮಾದಾನ ಮಾಡಿದನು ಎಂಬುವುದಾಗಿ ಪ ಳಿದರು

ಶಾರ್ ತದನರಿಕ

ಆಸಕ್ತಿ ನಿಶ್ಚಯ ಯಿತ ಸ್ವಪರಾಗಮಸ
ಸ್ವಾರ್ಥಾತ್ ಪರಾರ್ಥ ಪರದಿ ರನುಕಂಪಯಾ ಸ
ಉಜ್ಜೀವನಾಯ ಜಗತಾಂ ಉಪದಿಷ್ಟಪ್ರಾಗ್ಯಾಂ
ಬಕ್ತಿಂ ಪರೌ ಪಂಯಿತಾಂ ನಿಜಗಾದ ತುರ್ಯೇ

ತಮ್ಮ ಪಂಪ್ಪಾಪ್ತಿಯ ಸಂಬಂದ ನಿಶ್ಚಯವುಳ್ಳವರಾಗಿ ಆ ಳ್ವಾ ರರು ದಯೆಯಿಂದ ತಮ್ಮ ಪ್ರಯೋ ಜನಕಿಂತ ಇತರ ಪ್ರಯೋ ಜನದಲ್ಲಿ ಆಸಕ್ತವಾದ ಬುದಿಯುಳ್ಳವರಾಗಿ ಲೋಕದ ಜನರ ಉಜ್ಜೀವನಕಾಗಿ ಹಿಂದೆ ಉಪದೆ ಶಿಸಲ್ಪಟ್ಟ ಸರ್ವೇಶ್ವರನ ವಿಷಯವಾದ ಬಕ್ತಿಯು ಪಂ ದಿಂದ ಕೂಡಿದ್ದನ್ನಾಗಿ ನಾಲನೆಯ ದಶಕದಲ್ಲಿ ಪ ಳಿದರು

ಕಣ್ಣರ್ ಕಳಲಿಣ

ಕೃಷ್ಣಸ್ಯ ಪಾದಯುಗಳಂ ಪ್ರತಿಬಾವನಿ ಯಂ
ಜಿಜ್ಞಾಸತಂ ಜಗತಿ ಬಕ್ತಿ ಸಮುತ್ಸುಕಾನಾಂ
ಪ್ರಾಪ್ತೌ ತ್ವರಾತಿಶಯವಾನ್ ಮಿತಸೂಕ್ತಿಜಾತ
ಬಕ್ತೇಃ ಶ್ವರೀರ ಮಪಿ ಪಂಚಮತೊ ಜಗಾದ

(ಕಣ್ಣರ್ ಕಳಲಿಣ) ಎಂಬ ದಶಕದಲ್ಲಿ ನಮ್ಮಾಳ್ವಾರರು ತಾವು ಪರೂ ಕ್ಯ ಪ್ರಾಪ್ತಿಯಲ್ಲಿ ಬಹಳ ಆತುರವುಳ್ಳವರಾಗಿ ತಾವು ಮೊದಲು ಲೋಕದ ಜನರಿಗೆ ಉಪದೇಶಿಸಿದ ಬಕ್ತಿಯ ಸ್ವರೂಪವನ್ನು ಶ್ರಿಕೃಷ್ಣನ ಚರಣಾರ ವಿಂದ ವಿಷಯಿಕವಾದದ್ದು ಬಕ್ತಿ ಆಗುವುದು ಬಕ್ತರು ವಿಚಾರಿಸಿ ನಿರ್ಣ ಯಿಸಿರುವ ಬಕ್ತಿ ಸ್ವರೂಪವು ಇಂತದ ಎಂದು ಅತಿ ಸಂಗ್ರವವಾಗಿ ಪ ಳಿ ದರು

ಅರುಣ್ ಪರುನಾರ್

ವೈಕುಂಠದಾಮ ನಿದ ಶಯಿಷುಂ ಸ್ವಮಿಶಂ
ತಚ್ಚ ಸ್ವಕಿ ಯ ವಿದಿನ್ನದ ವಿದಾತುಕಾಮಂ
ಪಶ್ಯನ್ಮುನಿ ಪ್ರಮುದಿತೂ ನುಬಭೂವ ಷಷೇ
ವಾಂಛಾದಿಕಾ ಸ್ವವಿಷಯಾಪಕೃತಿ ಸ್ವದೀಯಾ

'ಅರುಳ್ ಪರುನಾರ್" ಯೆಂಬ ದಶಕದಲ್ಲಿ ನಮ್ಮಾಳ್ವಾರರು ಸರ್ವೇ ಶ್ವರನು ತನ್ನ ನಿಯಮನಾನುಸಾರವಾಗಿ ತಮ್ಮನ್ನು ಶ್ರಿ ವೈಕುಂಠಕ್ಕೆ ಕರೆದು ಕೊಂಡು ಹೋ ಗಲು ಇಚ್ಛಿಸಿದ್ದನ್ನು ಕಂಡು ಸಂತೂ ಷಿತರಾಗಿ ತಾನು ತಾನು ಅಪೇಕ್ಷಿಸಿದಕ್ಕಿಂತ ಅದಿಕವಾಗಿ ತಮ್ಮ ವಿಷಯದಲ್ಲಿ ಮಾಡಿದ ಉಪಕಾರವನ್ನು ಅನುಬವಿಸಿದರು

ಶಂಶೂಲ್ ಕವಿಕಾಳ್

ಅನ್ಯನ್ನುಪ್ಯಮ್ಯಮುಮಿತಿ ಸ್ವಶರೀರ ಲಾಭಂ
ತಮ್ಮೊ ಷ ಮುಗಮಪಿ ತತ್ವಜನೇ ಸ್ವಯಾಪ್ತಾಂ

ಸಾರ್ವಂ, ಚಿಕಿ ಷ್ಣುಂ ಅದಿಗಮ ಹರಿಂ ತದಿ ಯೀ
ಏ ತೇ ಮುನಿಸ್ಸ ಖಯ ಸಪ್ತಮತ್ತೂ ಮಮಜ್ಜ

"ಶಂಶೊ್ ಕವಿಕ್ಕಾಳ್ ಯೆಂಬುವ ದಶಕದಲ್ಲ ನಮ್ಮಾಳ್ವಾರರು ತಮ್ಮನ್ನು ಈ ಶರಿ ರದಿಂದವೆ ಹೊಂದವೆ ಕೆಂದು ತಮ್ಮ ವಿಗ್ರ ದಲ್ಲಿ ಆಸಕ್ತನಾಗಿ ಆ ವಿಗ್ರಹ ಮೊ ಹಗಳಲ್ಲಿ ವ್ಯಾಮುಗ್ಧನಾಗಿದ್ದರೂ ಈ ಪ್ರಾಕೃತಿ ವಿಗ್ರಹವನ್ನು ತ್ಯಜಿಸದ ಕಂದು ಪ್ರಾರ್ಥಿಸಲು ಅದನ್ನು ಅಂಗಿ ಕರಿಸಿದ ಸರ್ವೇಶ್ವರನ ಎಂಗುಣಗಳನು ಅನುಭವಿಸಿ ಅದರಲ್ಲೇ ಮಗ್ನರಾದರು

ತಿರುಮಾಲಿರುಂ ಶೋಲೈ

ವಾಮೊ ಹ ಮಾತ್ಮನಿ ವಿಲೋಕ್ಯ ವಿಭೊ ಅವೇಲಂ
ಅತಾದರೆ ಮಯಿ ಕದಂ ಕ್ಷಮನಾದರ ಪ್ರಾಕ್
ಹೇತುಂ ವದೊ ಚಿತ ಮಿಹೇತ್ಯನುಪೃಚ್ಛ ಚೈನಂ
ವತ್ತೂ ತ್ತರೂ ಮುನಿರನೇನ ಸ ಚಾಪ್ಪ ಮೇ ಬೂತ್

ಸರ್ವೇಶ್ವರನು ತಮ್ಮಲ್ಲಿ ಮಾಡಿದ ಅತಿವ್ಯಾಮೋಹವನ್ನು ಕಂಡು ಆತ ನನ್ನು ಕುರಿತು "ನೀನು ಈಗ ನನ್ನಲ್ಲಿ ಇಷ್ಟು ವ್ಯಾಮೋಹವನ್ನು ಮಾಡು ತ್ತಿರುವಿ ಇದಕೆ ಮುಂಚೆ ಯಾತಕಾಗಿ ಉಪೇಕ್ಷಿಸಿದೆ? ಇದಕ್ಕ ಸರಿ ಯಾದ ಉತ್ತರವನ್ನು ಹೇಳು' ಎಂಬುವುದಾಗಿ ಕೇಳಲು ಅದಕ್ಕೆ ಆತನು ಸರಿಯಾದ ಉತ್ತರವನ್ನು ಕೊಡಲಾರದೆ ನಿರುತ್ತರನಾದನು ಎಂಬುವು ದಾಗಿ ಹೇಳಿದರು

ಶೂಳ್ ವಿಶುಂಬು

ಸತ್ಕಾರ ಮದ್ಧನಿ ಸುರೈರಪಿ ಸನ್ನಿಕೃಷ್ಟೇ
ಪ್ರತ್ಯುದ್ಗತಿಂ ಪರಮದಾಮ್ನಿ ಜನೈಸ್ತದೀಯೈ
ತತ್ರ ಸ್ಥಿತಿಂ ಸುಖಮಯೀಂಚ ಹರಿಪ್ರಿಯಾಣಾಂ
ಆಸಾದಿತೂ ಮುನಿರ ಬೂನ್ನವಮೇ ಶರಾರಿ

"ಶೂಳ್‌ವಿಶುಂಬು ಎಂಬುವ ದಶಕದಲ್ಲಿ ನಮ್ಮಾಳ್ವಾರರು ಪರಿಜ್ಞಾ ನವುಳ್ಳವರಾಗಿ ಅರ್ಚಿರಾದಿ ಮಾರ್ಗದಲ್ಲಿ ಅಗ್ನ್ಯಾದಿದೇವತೆಗಳು ಮಾಡು ತ್ತಿರುವ ಪೂಜೆಯನ್ನು ಪರಮಪದವನ್ನು ಹೊಂದಿದ ಮೇಲೆ ಅಲ್ಲಿರುವ ನಿತ್ಯ ಸೂರಿಗಳಲ್ಲಿ ಕಲೆತು ಮಹದಾನಂದವನ್ನು ಅನುಭವಿಸು ತ್ತಿರುವ ಸ್ಥಿತಿಯನ್ನು ಸಾಕ್ಷಾತ್ಕರಿಸಿದರು

ಮುನಿಯೇ ನಾನುಕ್ರನೇ

ತದ್ದರ್ಶನಂ ಚ ಮನಸ್ಯವ ಸ ಚಕ್ಷುಷೇತಿ
ಬಕ್ತ್ಯಾ ಯುತ ಪರಮಯಾ ಬಗವಾನ್ ಶರಾರಿ
ಪದ್ಮಾಜ್ಞಯಾ ಬಗವತ ಪರಿಹೃತ್ಯ ಮಾಂದ್ಯಂ
ಸ್ವಾಬೀಷ್ಟಮಚ್ಯುತಪದಂ ದಶಮೇ ಪ್ರಪೇದೇ

"ಮುನಿಯೇ ನಾನ್ಮುಕನೇ ಎಂಬುವ ದಶಕದಲ್ಲಿ ನಮ್ಮಾಳ್ವಾರರು ಇದುವರೆಗೂ ಉಂಟಾದ ಬಗವತ್ ಸಾಕ್ಷಾತ್ಕಾರವು ಮಾನಸಿಕವಾದದ್ದೇ ಹೊರತು ಕಣ್ಣಿಗೆ ಒಂದು ಸಲವೂ ಕಾಣಬರಲಿಲ್ಲ ಎಂಬುವುದಾಗಿ ವಿಷ ಣ್ಣರಾಗಿ ಪರಮಬಕ್ತಿ ಪರವಶರಾಗಿ ಸರ್ವೇಶ್ವರನನ್ನು ಕುರಿತು ಇನ್ನು ನನ್ನ ಮೇಲ ಅಬೀಷ್ಟ ಪ್ರದಾನವನ್ನು ಮಾಡುವುದರಲ್ಲಿ ವಿಲಂಬಮಾಡ ನೇಡ ಹಾಗೆ ಮಾಡಿದರೆ ಶ್ರೀ ಲಕ್ಷ್ಮೀದೇವಿಯ ಮೇಲೆ ಆಣೆಯೆಂದು ನಿಬ ಂದಿಸಿ ತಮ್ಮ ಅಪೇಕ್ಷೆಯಂತೆ ಪರಮಪದವನ್ನು ಹೊಂದಿದರು

ಶ್ರೀ ವಾದಿಕೇಸರಿ ಅಳಿಗಿಯ ಮನವಾಳಜ್ಜೀಯರ್
ತಿರುವಡಿಗಳೇ ಶರಣಮ್

*

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ನಂದರ್ಶಿಸಿ ತಿರುಪತಿಯ ಇತರ ದೇವಾಲಯಗ ಳನ್ನು ನಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ ತಿ ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ ಈ ಬಸ್‌ನಲ್ಲಿ ಹೊರಟು

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( ೨ ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ ಬಳಗ್ಗೆ ೬.೦೦ ಬೆಳಗ್ಗೆ ೧೦.೦೦ ಸಂಜೆ ೩.೦೦
ಬಸ್ ಪ್ರಯಾಣದ ದರ ಒಂದು ಟಿಕೆಟ್ಟಿಗೆ ೧೮ ರೂ ಮಾತ್ರ ಕಿರಿಯರಿಗೆ ಅರ್ಧ ಟಿಕೆಟ್
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ)
ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ

ತಿ ತಿ ದೇ

# ಅಪರೂಪದ ಸ್ತೋತ್ರ ಗ್ರಂಥ ಪ್ರಕಾಶನ ಸಂಸ್ಥೆ

--ರಮಸುತ

ಇತ್ತೀಚೆಗೆ ಫುಟ್‌ಪಾತ್ ಅಂಗಡಿಗಳಲ್ಲಿ ಸುತ್ತಾಡುವಾಗ ಒಂದು ಪುಸ್ತಕ ಸಿಕ್ಕಿತು ಅದನ್ನು ನೋಡಿದ ಕೂಡಲೇ ಅದೆಷ್ಟು ಅಪೂರ್ವವಾದ ಗ್ರಂಥ ಎಂಬುದನ್ನು ಅರಿತು ಒಂದಿಷ್ಟೂ ಚೌಕಾಸಿ ಮಾಡದೆ ಅವನು ಹೇಳಿದ ಬೆಲೆಯನ್ನು ನೀಡಿ ಕೊಂಡು ತಂದೆ ಮನೆಗೆ ಬಂದು ಆ ಪುಸ್ತಕದ ಹಾಳೆಗಳನ್ನು ತಿರುವಿ ಹಾಕಿದಂತೆಲ್ಲ ಅದೆಷ್ಟು ಅಮೂಲ್ಯವಾದುದು ಎಂಬುವನ್ನು ಅರಿತೆ

'Prayers, Praises & Psalms' ಎನ್ನುವುದು ಆ ಪುಸ್ತಕದ ಹೆಸರು ಇದು ಕ್ರೌನ್ 1/12 ಆಕಾರದ 500 ಪುಟಗಳ ಬರ್ಜರಿ ಪುಸ್ತಕ ಇದನ್ನು 1938 ರಲ್ಲಿ ಮದ್ರಾಸ್‌ನ ಅಂದಿನ ಪ್ರಖ್ಯಾತ ಪ್ರಕಾಶನ ಸಂಸ್ಥೆಯಾದ ಜಿ ಎ ನಟೇಶನ್ ಅಂಡ್ ಕಂಪೆನಿಯವರು ಪ್ರಕಟಿಸಿದ್ದಾರೆ ಈ ಪುಸ್ತಕದಲ್ಲಿ ವೇದಗಳು, ಉಪನಿಷತ್ತುಗಳು, ಮಹಾಕಾವ್ಯಗಳು, ಪುರಾಣಗಳು, ಆಗಮಗಳು, ತಂತ್ರಗಳು ಹಾಗೂ ಖ್ಯಾತ ಆಚಾರ್ಯರ ಬರಹಗಳಿಂದ ಸಂಗ್ರಹಿಸಿರುವ ಅಮೂಲ್ಯ ಸ್ತೋತ್ರಗಳಿವೆ ಕೇವಲ ಸ್ತೋತ್ರಗಳನ್ನು ಮಾತ್ರ ಕೊಟ್ಟಿದ್ದರೆ ಈ ಪುಸ್ತಕದ ಬೆಲೆ ನೈತಿಕವಾಗಿ ಹೆಚ್ಚಾಗುತ್ತಿತ್ತೋ ಇಲ್ಲವೋ ತಿಳಿಯದು ಆದರೆ ಇದರ ನಿಜವಾದ ಬೆಲೆ ಬಂದಿರುವುದು ಇಲ್ಲಿನ ಸ್ತೋತ್ರಗಳ ಸಂಗ್ರಹಣದ ರೀತಿ ಹಾಗೂ ಅವುಗಳ ಸುಂದರ, ಸುಲಭ ಇಂಗ್ಲಿಷ್ ಅನುವಾದದಿಂದ ಈ ಸ್ತೋತ್ರಗಳನ್ನು ಸೂಕ್ತರೀತಿಯಲ್ಲಿ ಆರಿಸಿ, ಅವುಗಳ ಇಂಗ್ಲಿಷ್ ಅನುವಾದ ನೀಡಿರುವವರು ಖ್ಯಾತಿವೆತ್ತ ತತ್ವವೇತ್ತ, ಶಾಸ್ತ್ರಜ್ಞರಾದ ಡಾ|| ವಿ ರಾಘವನ್‌ರವರು ಈ ಪುಸ್ತಕಕ್ಕೆ ಮಹಾತ್ಮಾಗಾಂಧಿಯವರು ಮುನ್ನುಡಿ ಬರೆದಿದ್ದಾರೆ ಇದರ ಬೆಲೆ ರೂ 1 4 0 ನಂಬುವುದಕ್ಕೆ ಆಗದಿರುವಂತಹ ಬೆಲೆ ಇದು

ಈ ಪುಸ್ತಕಕ್ಕೆ ಅಂದಿನ ಅಣ್ಣಾಮಲೈ ವಿಶ್ವವಿದ್ಯಾನಿಲಯದ ಮಹಾಮಹೋಪಾಧ್ಯಾಯ ಪ್ರೊ|| ಎಸ್ ಕುಪ್ಪಸ್ವಾಮಿ ಶಾಸ್ತ್ರಿಗಳು 'ಪ್ರಶಂಸೆ ಯನ್ನು ಬರೆದುಕೊಟ್ಟಿದ್ದಾರೆ

ಈ ಪುಸ್ತಕವನ್ನು ಪ್ರಕಟಿಸಿರುವ ಜಿ ಎ ನಟೇಶನ್‌ರವರು ಸುಮಾರು 1913 ರಲ್ಲೆ 'HINDU PSALMS & HYMNS'ಎನ್ನುವ ಪುಟ್ಟ ಪುಸ್ತಕವೊಂದನ್ನು ಪ್ರಕಟಿಸಿದ್ದರು ಆದರೆ ಭಾರತೀಯ ಸಾಹಿತ್ಯದಲ್ಲಿರುವ ಎಲ್ಲ ಸ್ತೋತ್ರಗಳ ವಿಸ್ತೃತ ಸಂಗ್ರಹವನ್ನು ಪ್ರಕಟಿಸಬೇಕೆಂಬ ಆಸೆಯನ್ನು ಶ್ರೀ ನಟೇಶನ್‌ರವರು ಹೊಂದಿದ್ದರು ಅವರು ಪ್ರಕಟಿಸಿದ ರಾಮಾಯಣ, ಮಹಾಭಾರತ, ಭಾಗವತಗಳಲ್ಲಿ ಸ್ಥಳಾಭಾವದಿಂದ ಅಪರೂಪ ಸ್ತೋತ್ರಗಳನ್ನು ಕೈಬಿಟ್ಟಿದ್ದರು ಅಂತಯೆ ಈ ಪುಸ್ತಕವನ್ನು ಪ್ರಕಟಿಸಬೇಕೆಂದುಕೊಂಡಾಗ ಶ್ರೀ ಕುಪ್ಪಸ್ವಾಮಿ ಶಾಸ್ತ್ರಿಗಳೊಡನೆ ಇದರ ಬಗ್ಗೆ ಪರಾಮರ್ಶೆ ನಡೆಸಿ, ಪ್ರಾಚೀನ, ಮಧ್ಯಕಾಲೀನ ಸ್ತೋತ್ರಗಳನ್ನೇ ಅಲ್ಲದೆ ಆಧುನಿಕ ಸಾಹಿತ್ಯದಿಂದಲೂ ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ

ಸಂಸ್ಕೃತ ಸಾಹಿತದಲ್ಲಿ ಅಪಾರ ಸ್ತೋತ್ರ ಸಾಹಿತ್ಯ ರಾಶಿಯಿದೆ ನಮ್ಮ ಸಂಸ್ಕೃತ ಜ್ಞಾನ ಪ್ರಾರಂಭವಾಗುವುದೇ ಸ್ತೋತ್ರ ಸಾಹಿತ್ಯದಿಂದ ಋಗ್ವೇದವು ಸ್ತೋತ್ರಗಳ ಅತ್ಯಂತ ಪ್ರಾಚೀನ ಸಂಗ್ರಹ ಗ್ರಂಥ ನಂತರದಲ್ಲಿ ಹಿಂದೂಧರ್ಮ ಹಾಗೂ ತತ್ವವನ್ನು ಜನಪ್ರಿಯಗೊಳಿಸಿದ ಇತಿಹಾಸ ಹಾಗೂ ಪುರಾಣಗಳೂ ಕೂಡ ಸ್ತೋತ್ರಗಳ ಕಣಜಗಳಾಗಿವೆ ಕವಿಗಳು ಸಾಹಿತ್ಯಕ ಸೌಂದರ್ಯ ಪ್ರಧಾನವಾದ ಸ್ತೋತ್ರಗಳನ್ನು ರಚಿಸಿರುವರು ಹಿಂದೂ ತತ್ವ ಹಾಗೂ ಧರ್ಮಗಳ ಮಹಾನ್ ಸ್ಥಾಪಕರು ಹಾಗೂ ಪ್ರತಿಪಾದಕರು ದ ವ ಸ್ತೋತ್ರಗಳ ಬೃಹತ್ ಆಸ್ತಿಯನ್ನೆ ತಮ್ಮ ಹಿಂದೆ ಬಿಟ್ಟು ಹೋಗಿದ್ದಾರೆ ನಂತರದ ಸಂತರು, ಭಕ್ತರು ಹಾಗೂ ನವ ಭಕ್ತಿ ಪಂಥದ ನಾಯಕರುಗಳು ತಮ್ಮ ದೈವಭಕ್ತಿ ಭರಿತ ಹೃದಯದಿಂದ ವಿಪುಲ ಸ್ತೋತ್ರಗಳನ್ನು ನೀಡಿ, ಸಂಸ್ಕೃತ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ್ದಾರೆ

ಪ್ರತಿಯೊಬ್ಬ ಭಾರತೀಯನೂ, ಹಿಂದೂವ್ವಸ್ತ್ರೀಪುರುಷ ಆಬಾಲವೃದ್ಧರು ಪ್ರತಿ ನಿತ್ಯವೂ ಈ ಸ್ತೋತ್ರವನ್ನು ಹೇಳಿಕೊಳ್ಳುವರು ಬಾಲ್ಯಾವಸ್ಥೆಯಲ್ಲಿ ತಮ್ಮ ತಂದೆ ತಾಯಿಗಳ ತೊಡೆಯ ಮೇಲೆ ಕುಳಿತು ಪೌರಾಣಿಕ ಕಥೆ, ಕಥಾನಕಗಳನ್ನು ಆಲಿಸುವುದರೊಂದಿಗೆ ದೇವರ ಸ್ತೋತ್ರಗಳನ್ನೂ ಹೇಳಿಕೊಳ್ಳುವರು ಇದು ಪರಂಪರಾಗತವಾನುವಾದುದು ಬಾಲ್ಯದಲ್ಲಿ ಕಲಿತಿದ್ದೇ ಮುಂದೆ ದೊಡ್ಡವರಾದ ಮೇಲೂ ಮುಂದುವರಿಯುವುದು

ಹಸ್ತಪ್ರತಿ ಗ್ರಂಥಾಲಯಗಳಲ್ಲಿ ಸಂಸ್ಕೃತ ಸ್ತೋತ್ರಗಳ ರಾಶಿಯೇ ಬಿದ್ದಿದೆ ಇವುಗಳಲ್ಲಿ ಬಹಳ ಮುಖ್ಯವಾದವುಗಳನ್ನು ಬೊಂಬಾಯಿಯ ನಿರ್ಣಯ ಸಾಗರಪ್ರೆಸ್, ಅದೇ ಬೊಂಬಾಯಿ ನಗರದ ಗುಜರಾತಿ ಪ್ರಿಂಟಿಂಗ್ ಪ್ರೆಸ್, ಮದ್ರಾಸ್‌ನ ವಾವಿಳ್ಳ ರಾಮಸ್ವಾಮಿ ಶಾಸ್ತ್ರುಲು ಅಂಡ್ ಸನ್ಸ್, ಶ್ರೀ ರಂಗದ ವಾಣೀ ವಿಲಾಸ ಪ್ರೆಸ್‌ಗಳವರು ಹಾಗೂ ಮತ್ತಿತರರು ಪ್ರಕಟಿಸಿದ್ದಾರೆ ದಕ್ಷಿಣ ಭಾರತದ ಬರವಣಿಗೆಗಳು ಹಾಗೂ ಗ್ರಂಥಗಳಲ್ಲಿಯೂ ಕೂಡ ಇಂತಹ ಅನೇಕ ಸ್ತೋತ್ರಗಳು ಕಾಣಸಿಕೊಂಡಿವೆ ಆಂಗ್ಲ ಅನುವಾದದ ಕೆಲವೊಂದು ಸ್ತೋತ್ರಗ್ರಂಥಗಳು 1938 ರಷ್ಟು ಹೊತ್ತಿಗೆ ಬಂದಿದ್ದುವು. ಅವುಗಳಲ್ಲಿ ಮುಖ್ಯವಾದವು 'The Aryan Prayer Book'(ಇದು ಕನ್ನಡಿಗರೊಬ್ಬರ ಸಾಹಸ), 'Altar Flowers', 'Universal prayers ಇತ್ಯಾದಿಯವುಗಳು ಆದರೆ ಜಿ ಎ ನಟೇಶನ್‌ರವರ 1938 ರ ಪ್ರಕಟಣೆಯಾದ 'Prayers, Praises & Psalms' ಎನ್ನುವ ಕೃತಿಯು ಅದುವರೆವಿಗಿನ ಗ್ರಂಥಗಳಲ್ಲೆಲ್ಲ ಹೆಚ್ಚು ಪ್ರಾತಿನಿಧಿಕವಾದುದೂ, ಅತ್ಯಂತ ಬೃಹತ್ತಾದುದೂ ಆಗಿದೆ

ಈ ಗ್ರಂಥವು ಸಂಸ್ಕೃತ ಸಾಹಿತ್ಯದ ಸಂಪೂರ್ಣ ವಲಯವನ್ನು ಒಳಗೊಂಡಿದೆ ಇದರಲ್ಲಿ ಯಾವುದೇ ಪಂಥವನ್ನೂ ಬಿಟ್ಟಿಲ್ಲ ಸಂಗ್ರಹ ಕಾರ್ಯದಲ್ಲಿ ಯಾವುದೇ ಪಂಥವನ್ನು ಕಡೆಗಣಿಸಿಲ್ಲ, ಪಕ್ಷಪಾತ ಮಾಡಿಲ್ಲ ಬೇರೆ ಬೇರೆ ವ್ಯಕ್ತಿಗಳ ಅಗತ್ಯಗಳಿಗೆ ತಕ್ಕಂತೆ ಸಂಪಾದಕನ ಕಾರ್ಯವನ್ನು ಎಚ್ಚರದಿಂದ ನಿರ್ವಹಿಸಲಾಗಿದೆ ಅದೇ ರೀತಿಯಲ್ಲಿ ಭಾವನೆಗಳ ಪುನರಾವೃತ್ತಿಗಳನ್ನು ದೂರಮಾಡಲಾಗಿದೆ ಒಟ್ಟಿನಲ್ಲಿ ತುಂಬಾ ಅಚ್ಚುಕಟ್ಟಾದ, ಉಪಯುಕ್ತ ಸ್ತೋತ್ರಗ್ರಂಥವಿದು

ವೇದಗಳು ಮೊದಲ ಕಂತಿನಲ್ಲಿವೆ ಋಗ್ವೇದ (ಖಿಲವೂ ಸೇರಿ), ಕೃಷ್ಣಯಜುರ್ವೇದ, ಶುಕ್ಲ ಯಜುರ್ವೇದ ಹಾಗೂ ಅಥರ್ವಣವೇದಗಳಿಂದ ಸಂಪಾದಿಸಲಾಗಿದೆ ಉಪನಿಷತ್‌ಗಳಲ್ಲಿ ಈಶಾವಾಸ್ಯ ಕೇನ, ಛಾಂದೋಗ್ಯ ಇತ್ಯಾದಿ 14 ಉಪನಿಷತ್ತುಗಳ

ಪ್ರಾತಿನಿದಿಕ ಸ್ತೋತ್ರಗಳಿವೆ ವಾಲ್ಮೀಕಿ ರಾಮಾಯಣ ದಿಂದ ರಾಮನ ಗುಣವಿಶೇಷಗಳನ್ನು ವಿವರಿಸುವಂತಹ ಸ್ತೋತ್ರಗಳನ್ನು ನಿಡಿದ್ದರೂ, ಕೈಕೇಯಿ, ತಾರಾ ರವರುಗಳ ಶ್ರೀರಾಮಸ್ತೋತ್ರಗಳನ್ನು ನೀಡಲಾಗಿದೆ ಇದರೊಂದಿಗೆ ಆದಿತ್ಯ ಹೃದಯ, ಅದ್ಯಾತ್ಮರಾಮಾಯಣ, ಯೋಗ ವಾಸಿಷ್ಠ, ರಾಮಚರಿತ ಮಾನಸ ದಿಂದಲೂ ಸಂಗ್ರಹಿಸಲಾಗಿದೆ

ಮಹಾಭಾರತದಿಂದ ದ್ರೌಪದಿಯ ಸ್ತೋತ್ರ, ದೃತರಾಷ್ಟ್ರ, ಭೀಷ್ಮನ ಸ್ತವರಾಜ, ದಕ್ಷನ ಸ್ತೋತ್ರಗಳನ್ನು ನೀಡಲಾಗಿದೆ ಭಗವದ್ಗೀತೆಯ ವಿಶ್ವರೂಪ ಸ್ತುತಿ, ಶ್ರೀಮದ್ಭಾಗವತದ ಕುಂತೀ, ಭೀಷ್ಮ, ಶುಕ, ಧ್ರುವ, ವೃತ್ರ, ಪ್ರಹ್ಲಾದ, ಗಜೇಂದ್ರ, ಬ್ರಹ್ಮ ರಂತಿ ದೇವ, ದೇವಕೀ, ಅಕ್ರೂರ ಹಾಗೂ ಮುಚುಕುಂದರ ಸ್ತೋತ್ರಗಳನ್ನು ಸಂಗ್ರಹಿಸಿ ನೀಡಲಾಗಿದೆ

18 ಪುರಾಣಗಳಿಂದಲೂ ಪ್ರಾತಿನಿದಿಕವಾಗಿ ಸ್ತೋತ್ರಗಳನ್ನು ಆರಿಸಲಾಗಿದೆ ಇವು ವಿಷ್ಣು, ಶಿವ, ಗಣೇಶ, ಸರಸ್ವತಿ, ದೇವಿ, ಸೂರ್ಯರುಗಳನ್ನು ಕುರಿತದ್ದಾಗಿವೆ

ಆಗಮಗಳು ಹಾಗೂ ತಂತ್ರಗಳಿಂದ ಆರಿಸಿರುವವುಗಳು ತೂಕವಾಗಿವೆ ಮಹಾನಿರ್ವಾಣ ತಂತ್ರ, ಕುಮಾರ ತಂತ್ರ, ಪ್ರಪಂಚಸಾರ ತಂತ್ರ, ಕುಲಚೂಡಾಮಣಿ ತಂತ್ರ, ಕಲಿವಿಲಾಸ ತಂತ್ರಗಳಿಂದಲ್ಲದೆ ಬ್ರಹ್ಮ ಸಂಹಿತ, ಈಶ್ವರ ಸಂಹಿತ, ಪಾಂಚರಾತ್ರಗಳಿಂದಲೂ ಸ್ತೋತ್ರಗಳನ್ನು ತೆಗೆದುಕೊಳ್ಳಲಾಗಿದೆ

ನಂತರದ್ದು ಮಹಾಕಾವ್ಯಗಳಿಂದ ಆಯ್ದದ್ದು ಕಾಳಿದಾಸನ ರಘುವಂಶ, ಶಕುಂತಳಾ, ವಿಕ್ರಮೋರ್ವಶೀಯ, ಮಾಲವಿಕಾಗ್ನಿಮಿತ್ರ ಭರ್ತೃಹರಿಯ ಸುಭಾಷಿತ ತ್ರಿಶತಿ, ಮಯೂರನ ಸೂರ್ಯಶತಕ, ಬಾಣನ ಹರ್ಷಚರಿತ್ರ, ಸುಬಂದುವಿನ ವಾಸವದತ್ತ, ಭವಭೂತಿಯ ಮಹಾವೀರ ಚರಿತೆ, ಮಾಲತಿ ಮಾದವ, ಕೃಷ್ಣಮಿಶ್ರನ ಪ್ರಬೋಧ ಚಂದ್ರೋದಯ, ಶ್ರೀಹರ್ಷನ ನಿಷದೀಯಚರಿತ ಮತ್ತಿತರ ಕವಿಗಳ ಸ್ತೋತ್ರಗಳಿವೆ

ನಂತರ ಆಚಾರ್ಯರ ರಚನೆಗಳಿವೆ ಮುಖ್ಯವಾಗಿ ಆದಿ ಶಂಕರಾಚಾರ್ಯರ ಶಿವಾನಂದ ಲಹರಿ, ಸೌಂದರ್ಯಲಹರಿ ಇತ್ಯಾದಿ 21 ಸ್ತೋತ್ರಗಳಿವೆ ಇವುಗಳಲ್ಲಿ ಶ್ರೀ ಶಂಕರರ ದಶಶ್ಲೋಕಿ, ಷಟ್ಪದಿ ಸ್ತೋತ್ರ ಇತ್ಯಾದಿ ಅಪರೂಪ ಸ್ತೋತ್ರಗಳೂ ಸೇರಿವೆ ಇವಲ್ಲದೆ ಉತ್ಪಲ ದೇವಾಚಾರ್ಯ, ಶ್ರೀಕಂಠಾಚಾರ್ಯ, ಯಾಮುನಾಚಾರ್ಯ, ರಾಮಾನುಜಾಚಾರ್ಯ, ಶ್ರೀ ವತ್ಸಾಂಕಮಿಶ್ರ, ಪರಾಶರಭಟ್ಟ, ವೆ ದಾಚಾರ್ಯ, ವೆ ದಾಂತದೇಶಿಕ ವೆ ಂಕಟಧ್ವರಿ, ವಲ್ಲಭಾಚಾರ್ಯ, ವಿಠ್ಠಲೇಶ್ವರ, ಹರಿದಾಸ, ಮಾದವಾಚಾರ್ಯ, ವಾದಿರಾಜ, ಚೈತನ್ಯ ಹಾಗೂ ರೂಪಾ ಗೋಸ್ವಾಮಿರವರುಗಳ ಅತ್ಯಮೂಲ್ಯ ಸ್ತೋತ್ರಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ

ಇವುಗಳೊಂದಿಗೆ ಇನ್ನೂ ಕೆಲವು ಸ್ತೋತ್ರಗಳನ್ನು 'ಇತರೇ ಸ್ತೋತ್ರಗಳು ಎನ್ನುವ ವಿಭಾಗದಲ್ಲಿ ನೀಡಲಾಗಿದೆ ಮುಖ್ಯವಾಗಿ ಶಿವಪಂಚಸ್ತವಿ, (ಪುಷ್ಪದಂತ, ಮಲ್ಹಣ, ಬಿಲ್ಹಣ ದಂಡಿ, ಹಲಾಯುದರವರ ರಚನೆಗಳು); ದೂರ್ವಾಸ ದೇವಿಪಂಚಸ್ತವಿ (ಕಾಳಿದಾಸನ ರಚನೆ), ಮೂಕ ಪಂಚಸ್ತವಿ ಕುಲಶೇಖರರ ಮುಕುಂದಮಾಲಾ ಲೀಲಾಶುಕನ ಕೃಷ್ಣ ಕರ್ಣಾಮೃತ ಲೋಸ್ಯದೇವನ ದಿನಕರಸ್ತೋತ್ರ, ಜಗದ್ಧರನ ಸ್ತುತಿಕುಸುಮಾಂಜಲಿ ಅಪ್ಪಯ್ಯ ದೀಕ್ಷಿತರ ಕುವಲಯಾನಂದ, ಮಾನಸೋಲ್ಲಾಸ ಇತ್ಯಾದಿ ಸ್ತುತಿಗಳು ನೀಲಕಂಠ ದೀಕ್ಷಿತರ ಆನಂದಸಾಗರಸ್ತವ ಮತ್ತು ಶಿವೋತ್ಕರ್ಷಮಂಜರಿ, ಜಗನ್ನಾದನ ಕರುಣಾಲಹರಿ, ಅಯ್ಯವಾಳ್ ಎಂದೆ ಹೆಸರಾದ ಶ್ರೀದರ ವೆಂಕಟೇಶನ ದಯಾಶತಕ, ಅಕ್ಷಯ ಷಷ್ಠಿಗಳು, ನಾರಾಯಣಭಟ್ಟಾದ್ರಿಯ ನಾರಾಯಣೀಯ ಸದಾಶಿವ ಬ್ರಹ್ಮೇಂದ್ರರ ನವವರ್ಣ ಮಾಲೆ, ರಾಮಭದ್ರ ದೀಕ್ಷಿತನ ಶ್ರೀರಾಮನನ್ನು ಕುರಿತಾದ ಸ್ತವಗಳು ಸ್ವಾತಿ ತಿರುನಾಳರ ಭಕ್ತಿಮಂಜರಿ, ಬಾಲಭಟ್ಟ ಪಯಗುಂಡ (ಬಾಲಕೃಷ್ಣ) ಅವಿಮುಕ್ತಾ ತತ್ವ, ಶೃಂಗೇರಿಯ ನರಸಿಂಹ ಭಾರತಿ ಸ್ವಾಮಿಯವರ ಶ್ರೀಕೃಷ್ಣಾಷ್ಟಕ ಇತ್ಯಾದಿ ಐದು ಸ್ತೋತ್ರಗಳು ಅಭಿನವಗುಪ್ತನ 'ಭೈರವಿಸ್ತೋತ್ರ, ರಾವಣನ ಶಿವಸ್ತುತಿ, ಮಂತ್ರ ಸಾಹಿತ್ಯದ ಅದ್ಯಾದಿ ಮಹಾಲಕ್ಷ್ಮಿ ಹೃದಯಸ್ತೋತ್ರ, ಬ್ರಹ್ಮಾನಂದನ ಭಗವಚ್ಚರಣ ಸ್ತೋತ್ರ, ಶುಕದೇವನ ಮದುಸೂದನ ಸ್ತೋತ್ರ ಮತ್ತು ಪಾಂಡವಗೀತೆಗಳು ಈ ವಿಭಾಗದಲ್ಲಿವೆ

ನಂತರ ಕೃತಿಗಳ ಹಾಗೂ ಕೃತಿಕಾರರ ಬಗ್ಗೆ ವಿಸ್ತೃತ ವಿವರಣೆಗಳನ್ನು ಡಾ|| ವಿ ರಾಘವನ್‌ರವರೇ ನೀಡಿದ್ದಾರೆ ಇದರೊಂದಿಗೆ ಇವರ, ಇವುಗಳ ಸೂಚಿ ಇದೆ ಇದರ ನಂತರ ಅಕ್ಷರ ಕ್ರಮಾಂಕದಲ್ಲಿ ಪೂಜಾದಿ ದೇವಿ, ದೇವತೆ, ದೇವರುಗಳ ವಿವರಾತ್ಮಕ ಅನುಕ್ರಮಣಿಕೆ ಇದೆ ಕಡೆಯಲ್ಲಿ beauty, compassion, ecstasy ಇತ್ಯಾದಿ ಭಾವನೆಗಳ ಪುಟ ಸಂಖ್ಯೆಯೊಂದಿಗಿನ ಸೂಚಿ ಇದೆ

ಇವೆಲ್ಲವುಗಳಿಂದ ಕೂಡಿದ ಈ ಗ್ರಂದವು ಒಂದು ಅಪರೂಪ ಹಾಗೂ ಪವಿತ್ರಗ್ರಂದವಾಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ

ಈ ಕೃತಿಯನ್ನು ಪ್ರಕಟಿಸಿರುವ ಜಿ ವಿ ನಟೇಶನ್ ಅಂಡ್ ಕಂಪೆನಿಯವರು ಭಾರತಿ ಯ ಪ್ರಕಾಶನ ಸಾಹಿತ್ಯದಲ್ಲಿ ಅತಮೂಲ್ಯವಾದ ಕೊಡುಗೆಗಳನ್ನು ನಿಡಿದಾರೆ ಮೊದಲ ಬಾರಿಗೆ ರಾಮಾಯಣ, ಮಹಾಭಾರತ ಹಾಗೂ ಭಾಗವತಗಳ ಮೂಲ ಸಂಸ್ಕೃತ ಲಿಪಿಯಲ್ಲಿ ಮತ್ತು ಅವರೊಂದಿಗೆ ಇಂಗ್ಲಿಷ್ ಭಾಷಾಂತರಗಳನ್ನು ನೀಡಿದರು ಭಾಗವತವನ್ನು ಡಾ|| ವಿ ರಾಘವನ್‌ರವರೂ, ರಾಮಾಯಣವನ್ನು ಪ್ರೊ|| ಎ ಎ ಎಸ್ ಶಾಸ್ತ್ರಿಯವರೂ, ಮಹಾಭಾರತವನ್ನು ಡಾ|| ವಿ ರಾಘವನ್‌ರವರೂ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ ಈ ಪುಸ್ತಕಗಳು ಈ ಶತಮಾನದ ಮೂರನೆ ದಶಕದಲ್ಲಿ ಮುದ್ರಣವಾಗಿ, ತುಂಬಾ ಜನಪ್ರಿಯತೆಯನ್ನು ಪಡೆದಿದ್ದುವು. ಸುಂದರವಾದ, ಅಚ್ಚುಕಟ್ಟಾದ ಮುದ್ರಣದ ಈ ಮೂರು ಪುಸ್ತಕಗಳಿಗೆ ಪ್ರತಿಯೊಂದಕ್ಕೆ ರೂ 1 4 0 ಗಳು ಜಿ ಎ ನಟೇಶನ್‌ರವರು ಅಂದಿನ ಜನಪ್ರಿಯ ಮಾಸಿಕವಾದ 'ದಿ ಇಂಡಿಯನ್ ರಿವ್ಯೂ'ವನ್ನು ಪ್ರಕಟಿಸುತ್ತಿದ್ದರು ಈ ಪತ್ರಿಕೆಯ ಚಂದಾದಾರರಿಗೆ ಈ ಪುಸ್ತಕಗಳ ಬೆಲೆಯಲ್ಲಿ ವಿನಾಯಿತಿ ಉಂಟು ಈ ಪ್ರತಿಯೊಂದು ಪುಸ್ತಕವೂ ಚಂದಾದಾರರಿಗೆ 1 ರೂ ಮಾತ್ರ

ಇವಲ್ಲದೆ ಈ ಸಂಸ್ಥೆಯು ಇನ್ನೂ ಅನೇಕ ದಾರ್ಮಿಕ ಹಾಗೂ ಉಪಯುಕ್ತ ಗ್ರಂದಗಳನ್ನು ಪ್ರಕಟಿಸಿತ್ತು ಅಂತಹವುಗಳಲ್ಲಿ 'Aspects of vedanta' ಎನ್ನುವುದೂ ಒಂದು ಅಂದಿನ ಖ್ಯಾತಿವೆತ್ತ ಲೇಖಕರ ವಿಚಾರ ಸಂಕೀರ್ಣದ ಪ್ರಬಂದಗಳ ಸಂಕಲನವಿದು ಇದರಲ್ಲಿ ಎನ್ ವೈದ್ಯನಾದ ಅಯ್ಯರ್, ಪ್ರೊ|| ಮಾಕ್ಸ್‌ಮುಲ್ಲರ್, ಪ್ರೊ|| ಎಂ ರಂಗಾಚಾರ್ಯ, ಡಾ|| ಪಾಲ್ ಡ್ಯೂಸನ್, ಸ್ವಾಮಿ ವಿವೇಕಾನಂದ, ಸ್ವಾಮಿ ಅಬೇದಾನಂದರವರುಗಳ ಉತ್ಕೃಷ್ಟ ಲೇಖನಗಳಿದ್ದುವು. ಇಷ್ಟೊಂದು ದೊಡ್ಡ ಪುಸ್ತಕದ ಬೆಲೆ ಕೇವಲ 1 ರೂ ಮಾತ್ರ.

ಇವರ ಮತ್ತೊಂದು ಮಹತ್ವಪೂರ್ಣ ಕೃತಿ ಎಂದರೆ Sankar's select works ಎನ್ನುವುದು ಆದಿ ಶಂಕರರ ಮೂಲಸ್ತೋತ್ರಗಳು ದೇವನಾಗರಿ ಲಿಪಿಯಲ್ಲಿ ಮತ್ತು ಎಸ್ ವೆಂಕಟರಮಣನ್‌ರವರ ಇಂಗ್ಲಿಷ್ ಅನುವಾದದಿಂದ ಕೂಡಿದ ಈ ಕಡತಿಯ ಬೆಲೆ ರೂ 2 00 ಮಾತ್ರ.

ಇವಲ್ಲದೆ Hindu Religion and Philosophy ಎನ್ನುವ ಮಾಲೆಯಲ್ಲಿ ಭಗವದ್ಗೀತೆ (ಡಾ|| ಆನಿಬೆಸೆಂಟ್), ಸ್ವಾಮಿ ವಿವೇಕಾನಂದರ ಭಾಷಣಗಳು ಮತ್ತೂ ಲೇಖನಗಳು ದಿ

## ಪ್ರಕಟಣೆ

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

**ತಿ ತಿ ದೇ**

ಮಿಷನ್ ಆಫ್ ಅವರ್ ಮಾಸ್ಟರ್ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಖ್ಯಾತ ತತ್ವಶಾಸ್ತ್ರಜ್ಞರ ಲೇಖನಗಳ ಸಂಕಲನ ಹಿಂದೂ ಎಥಿಕ್ಸ್ (ಬಾಬು ಗೋವಿಂದದಾಸ್) ಚೈತನ್ಯ ಟು ವಿವೇಕಾನಂದ ಬಂಗಾಳದ ಸಂತರ ಜೀವನ ಚರಿತ್ರೆಗಳು ರಮಾನಂದ ಟು ರಾಮತೀರ್ಥ ಉತ್ತರ ಭಾರತದ ಸಂತರ ಜೀವನ ಚರಿತ್ರೆಗಳು ದ್ಲಿ ಗ್ರೇಟ್ ಆಚಾರ್ಯಾಸ್ ಎನ್ನುವ ಕೃತಿಗಳು ಪ್ರಕಟಗೊಂಡಿದ್ದುವು.

ಇವರೊಂದಿಗೆ ದಿ ವರ್ಲ್ಡ್ ಟೀಚರ್ಸ್ ಎನ್ನುವ ಮಾಲೆಯನ್ನು ನಟೇಶನ್‌ರವರು ಪ್ರಾರಂಭಿಸಿದ್ದರು. ಈ ಮಾಲೆಯಲ್ಲಿ ಲೈಫ್ ಅಂಡ್ ಟೀಚಿಂಗ್ಸ್ ಆಫ್ ಜೋರೋಸ್ಟರ್ (ಪ್ರೊ|| ಎ ಆರ್ ವಾಡಿಯಾ) ಲೈಫ್ ಅಂಡ್ ಟೀಚಿಂಗ್ಸ್ ಆಫ್ ಮೊಹಮ್ಮದ್ (ಅಹ್ಮದ್ ಷಫಿ ಮತ್ತು ಯಾಕೂಬ್ ಹಸನ್) ಹಾಗೂ ಶ್ರೀಕೃಷ್ಣ ಮತ್ತು ಏಸುಕ್ರಿಸ್ತ ಪುಸ್ತಕಗಳು ಪ್ರಕಟಗೊಂಡಿವೆ.

ನಟೇಶನ್ಸ್ ನ್ಯಾಷನಲ್ ಲಿಟರೇಚರ್ ಎನ್ನುವ ಮಾಲಿಕೆಯಲ್ಲಿ ಕ್ಯಾಲಿಕೊ ಹೊದ್ದಿಕೆಯ 17 ಸಂಪುಟಗಳನ್ನು ಈ ಸಂಸ್ಥೆ ಪ್ರಕಟಿಸಿತು. ಇವರಲ್ಲಿ ಸ್ವಾಮಿ ವಿವೇಕಾನಂದ, ಡಾ|| ಆನಿ ಬೆಸೆಂಟ್, ರಾಜಾರಾಮ ಮೋಹನ್‌ರಾಯ್, ಸರೋಜಿನಿ ನಾಯ್ಡು, ಸರ್ ಜಗದೀಶ್ ಚಂದ್ರಬೋಸ್, ಡಾ|| ಪಿ ಸಿ ರೇ, ಸರ್ ವಿಲಿಯಂ ವೆಡ್ಡರ್‌ಬರ್ನ್, ಮದನ ಮೋಹನ ಮಾಳವಿಯ, ಸರ್ ದಿನ್‌ಷಾ ವಾಚಾ, ಲಾರ್ಡ್ ಸಿನ್ಹಾ ಇತ್ಯಾದಿ ಮಹಾನುಭಾವರುಗಳ ಭಾಷಣಗಳು ಮತ್ತು ಲೇಖನಗಳು ಇದ್ದು, ಪ್ರತಿ ಸಂಪುಟದ ಬೆಲೆ ರೂ 3 0 0 ಆಗಿತ್ತು.

ಇದಕ್ಕೆ ಸಮಾನಾಂತರವಾಗಿ ಇಂಡಿಯನ್ ಜಡ್ಜಸ್, ಫೇಮಸ್ ಪಾರ್ಸೀಸ್, ಎಮಿನೆಂಟ್ ಮುಸ್ಲಿಮ್‌ಮ್ಯಾನ್ಸ್ ಇಂಡಿಯನ್ ಕ್ರಿಶ್ಚಿಯನ್ಸ್ ಇಂಡಿಯನ್ ಸ್ಟೇಟ್ಸ್‌ಮೆನ್, ಇಂಡಿಯನ್ ಸೈಂಟಿಸ್ಟ್ಸ್ ಎನ್ನುವ ಕೃತಿಗಳು ಪ್ರಕಟವಾದುವು. ಪ್ರತಿಯೊಂದರಲ್ಲಿಯೂ ಆಯಾಯಾ ವಿಭಾಗದ ಇಪ್ಪತ್ತು ಶ್ರೇಷ್ಠರ ಜೀವನಚರಿತ್ರೆಗಳಿವೆ. ಇವು ನ್ಯಾಷನಲ್ ಬಯಾಗ್ರಫೀಸ್ ಎನ್ನುವ ಮಾಲೆಯಲ್ಲಿ ಪ್ರಕಟಗೊಂಡಿದ್ದುವು. ಜಿ ಎ ನಟೇಶನ್‌ರವರು ಕಟ್ಟಾಗಾಂಧೀ ಭಕ್ತರು, ಆಗಿನ ಕಾಂಗ್ರೆಸ್‌ನ ನಿಷ್ಠಾವಂತ ಸೇವಕರು. ಹೀಗಾಗಿ ಇವರಿಗೆ ಗಾಂಧೀಜೀಯವರು ಅಪರ ದೈವ. ಇದರಿಂದ ಗಾಂಧೀಜೀಯವರ ಅನೇಕ ಕೃತಿಗಳನ್ನು ಇವರು ಪ್ರಪ್ರಥಮವಾಗಿ ಪ್ರಕಟಿಸಿದರು. ಮಹಾತ್ಮಾಗಾಂಧೀಜಿಯವರ ಭಾಷಣಗಳು ಮತ್ತು ಲೇಖನಗಳು 1200 ಪುಟಗಳ ಬೃಹತ್ ಗ್ರಂಥವಿದು. ಆಗ್ಗೆ 4 ನೇ ಮುದ್ರಣದ ಪ್ರಕಟಣೆ. ಬೆಲೆ ರೂ 4 0 0 ಆಗ್ಗೆ ತುಂಬಾ ಹೆಚ್ಚು. ಮತ್ತೊಂದು ಕೃತಿ ಮಹಾತ್ಮಾಗಾಂಧೀ ದಿ ಮ್ಯಾನ್ ಅಂಡ್ ಹಿಸ್ ಮಿಷನ್ ಇದರ ಬೆಲೆ ರೂ 1 0 0 ಗಾಂಧೀಜೀಯವರ ಮತ್ತೊಂದು ಕೃತಿ 'ಹಿಂದ್ ಸ್ವರಾಜ್ ಆರ್ ಇಂಡಿಯನ್ ಹೋಂ ರೂಲ್' ಎನ್ನುವುದು. ಇದೂ 4 ನೇ ಮುದ್ರಣವೆ. ಬೆಲೆ ರೂ 0 8 0 ಮಾತ್ರ.

ಕಾಂಗ್ರೆಸ್ ಪ್ರೆಸಿಡೆನ್‌ಷಿಯಲ್ ಅಡ್ರಸಸ್ ಎನ್ನುವ ಕಾಂಗ್ರೆಸ್ ಅಧ್ಯಕ್ಷರುಗಳ ಭಾಷಣಗಳನ್ನು ಎರಡು ಸಂಪುಟಗಳಲ್ಲಿ ಈ ಸಂಸ್ಥೆ ಪ್ರಕಟಿಸಿತ್ತು. ಮೊದಲ ಸಂಪುಟ 1885 ರಿಂದ 1910 ರ ವರೆವಿಗಿನ, ಎರಡನೇ ಸಂಪುಟವು 1911 ರಿಂದ 1934 ರ ವರೆವಿಗಿನ ಅಧ್ಯಕ್ಷರ ಭಾಷಣಗಳನ್ನು ಹೊಂದಿದ್ದುವು. ಪ್ರತಿಯೊಂದು ಕ್ರೌನ್ ಅಷ್ಟವಳದ 1000 ಪುಟಗಳ ಕೃತಿ ಮತ್ತು ಬೆಲೆ ರೂ 4 0 0 ಹೀಗೆ ಎರಡು ಸಂಪುಟಗಳನ್ನು ಮಾಡಿರುವುದರಲ್ಲಿಯೂ ಒಂದು ಅರ್ಥವಿದೆ. ಮೊದಲ ಸಂಪುಟವು ಸಂಸ್ಥೆಯ ಸ್ಥಾಪನೆಯಿಂದ ಬೆಳ್ಳಿಹಬ್ಬದವರೆವಿಗಿನ ಭಾಷಣ ಸಂಕಲನವಿದ್ದರೆ, ಎರಡನೆಯದು ಬೆಳ್ಳಿ ಹಬ್ಬದಿಂದ ಚಿನ್ನದ ಹಬ್ಬದವರೆವಿಗಿನ ಭಾಷಣಗಳನ್ನು ಸಂಗ್ರಹಿಸಿದೆ.

Books on India – ಎನ್ನುವ ಮತ್ತೊಂದು ಮಾಲೆಯನ್ನು ಈ ಸಂಸ್ಥೆ ಪ್ರಕಟಿಸಿದೆ. ಇಂಡಿಯನ್ ಓವರ್ ಸೀಸ್ ಎನ್ನುವ ಡಾ|| ಲಂಕಸತ್ಯಂರವರ ಕೃತಿಯು ಅಂದಿಗೆ ವಿದೇಶಗಳಲ್ಲಿನ 27 ಲಕ್ಷ ಭಾರತೀಯರ ಪ್ರಮುಖ ಸಮಸ್ಯೆಗಳ ವ್ಯವಸ್ಥಿತ ಅಧ್ಯಯನದ ಸಂಕಲನವಾಗಿತ್ತು. ಈ ನಿಟ್ಟಿನಲ್ಲಿ ಇದು ಪ್ರಪ್ರಥಮ ಗ್ರಂಥ ಎನ್ನಬಹುದು. ಬೆಲೆ ರೂ 1 8 0 ಇಂಡಿಯನ್ 'ನ್ಯಾಷನಲ್' ಎವಲ್ಯೂಷನ್ ಎನ್ನುವ ಎ ಸಿ ಮಜುಂದಾರ್‌ರವರ ಕೃತಿಯು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಉಗಮ ಮತ್ತು ಪ್ರಗತಿಗಳ ಕ್ರಮಬದ್ಧ ಅಧ್ಯಯನವಾಗಿತ್ತು. ಭಾರತೀಯ ರಾಷ್ಟ್ರೀಯತ್ವದ ಬೆಳವಣಿಗೆಯನ್ನು ವಿವರಿಸುವ ಅನುಪಮ ಕೃತಿಯಾಗಿತ್ತು. ಈ ಮಾಲೆಯಲ್ಲಿನ ಮತ್ತೊಂದು ಉಪಯುಕ್ತ ಕೃತಿಯೆಂದರೆ ಸರ್ ಎಸ್ ರಾಧಾಕೃಷ್ಣನ್‌ರವರ 'ಫ್ರೀಡಂ ಅಂಡ್ ಕಲ್ಚರ್' ಎನ್ನುವುದು. ಇವರ ಮತ್ತೊಂದು ಕೃತಿ 'ದಿ ಹಾರ್ಟ್ ಆಫ್ ಹಿಂದೂಸ್ತಾನ್' ಎನ್ನುವುದು. ಈ ಮಾಲೆಯಲ್ಲಿನ ಇತರೇ ಕೃತಿಗಳೆಂದರೆ ಲೀಡರ್ಸ್ ಆಫ್ ಬ್ರಹ್ಮೋಸಮಾಜ್ ಡಾ|| ಪಟ್ಟಾಭಿ ಸೀತಾರಾಮಯ್ಯನವರ 'ಆನ್ ಖದ್ದರ್' ಮಹದೇವ ಗೋವಿಂದ ರಾನಡೆಯವರ 'ಎಸ್ಸೇಸ್ ಆನ್ ಇಂಡಿಯನ್ ಎಕನಾಮಿಕ್ಸ್' ಟಿ ಕೆ ಗೋಪಾಲ ಪಣಿಕ್ಕರ್‌ರವರ 'ಮಲಬಾರ್ ಅಂಡ್ ಇಟ್ಸ್ ಫೋಕ್' 'ಇಂಡಿಯನ್ ಟೇಲ್ಸ್ ಆಫ್ ಫನ್ ಫಾಲಿ ಅಂಡ್ ಫೋಕ್‌ಲೋರ್' 'ಟೇಲ್ಸ್ ಫ್ರಂ ದಿ ಡ್ರಮಾಟಿಸ್ಟ್' ಹಾಗೂ ಡಾ|| ನರೇಶ್ ಚಂದ್ರ ಸೇನ್ ಗುಪ್ತರ 'ದಿ ಈಡಿಯಟ್ಸ್ ವೈಫ್' ಇತ್ಯಾದಿಯವು.

ಇದರೊಂದಿಗೆ ಜಿ ಎ ನಟೇಶನ್‌ರವರು ನಡೆಸುತ್ತಿದ್ದ 'ದಿ ಇಂಡಿಯನ್ ರಿವ್ಯೂ' ಎನ್ನುವ ಮಾಸಪತ್ರಿಕೆಯು ಅಂದಿನ ಭಾರತದ ರಾಜಕೀಯ, ಆರ್ಥಿಕ, ಕೈಗಾರಿಕೆ, ವ್ಯವಸಾಯ, ಧಾರ್ಮಿಕ, ಹಾಗೂ ಸಾಮಾಜಿಕ ಜೀವನದ ಕೈಗನ್ನಡಿಯಾಗಿತ್ತು. ಇವು ಪ್ರತಿ ವರ್ಷದ ಪ್ರತಿಗಳನ್ನು ಗಟ್ಟಿರಟ್ಟಿನ ಸಂಪುಟಗಳನ್ನಾಗಿ 1900 ರಿಂದ 1937 ರವರೆಗಿನ 37 ಸಂಪುಟಗಳನ್ನು ಸಿದ್ಧಗೊಳಿಸಿದ್ದರು. ಪ್ರತಿ ಸಂಪುಟದ ಬೆಲೆ ರೂ 8 0 0 ಈ ಸಂಪುಟಗಳನ್ನು ಭಾರತದ ವಿಶ್ವ ಕೋಶವೆಂದರೂ ತಪ್ಪಲ್ಲ.

ಇಷ್ಟೊಂದು ಭದ್ರಬುನಾದಿಯ ಮೇಲೆ ಸ್ಥಾಪಿತವಾದ ಜಿ ಎ ನಟೇಶನ್ ಅಂಡ್ ಕಂಪನಿಯು, ನಟೇಶನ್‌ರ ಮರಣಾನಂತರ ತೆರೆಯ ಹಿಂದೆ ಸರಿಯಿತು. ತನ್ನದೇ ಆದ ಒಂದು ವೈಭವ ಅಧ್ಯಾಯವನ್ನು ಬರೆದ ಈ ಪ್ರಕಟಣ ಸಂಸ್ಥೆಯ ನೆನಪು, ಇಂದು ಬರೀ ನೆನಪಾಗಿಯೇ ಉಳಿದಿದೆ. *

# ಶ್ರೀರಾಮನ ಅವತಾರ ವೈವಿಧ್ಯ

---ಡಾ|| ಆರ್ ರಾಮಕೃಷ್ಣ

ಪ್ರಪಂಚದ ಮಹಾಕಾವ್ಯಗಳ ಪೈಕಿ ರಾಮಾಯಣವೂ ಒಂದು ಅದು ಭರತಭೂಮಿಯ ಆದಿಕಾವ್ಯ ಆರಾಧನಾ ಕಾವ್ಯ ಅದನ್ನು ಶ್ರೇಷ್ಠಕಾವ್ಯವೆಂದು ಆಸ್ವಾದಿಸುವ ಜನ ಇರುವಂತೆಯೇ ಉತ್ತಮ ಪುರಾಣವೆಂದು ಆರಾಧಿಸುವ ಜನರೂ ಇದ್ದಾರೆ ರಾಮಾಯಣ ಒಂದು ಇತಿಹಾಸ ಎಂದು ಹೇಳುವವರೂ ಉಂಟು ನಮ್ಮ ದೇಶಭಾಷೆಗಳಲ್ಲಿ ಮಾತ್ರವಲ್ಲದೆ, ಭಾರತದ ನೆರೆಹೊರೆಯ ದೇಶಗಳ ಅನೇಕ ಭಾಷೆಗಳಲ್ಲಿಯೂ ಈ ಕಾವ್ಯ ನೂರಾರು ಕೃತಿಗಳಿಗೆ ಮೂಲ ಆಕರವಾಗಿದೆ ಅನೇಕ ಕವಿಗಳಿಗೆ ಸ್ಫೂರ್ತಿಯ ಸೆಲೆಯನ್ನು ಒದಗಿಸಿದೆ ರಾಮಾಯಣ ಅನುವಾದಗೊಳ್ಳದ ದೇಶೀಯ ಭಾಷೆಗಳೇ ಇಲ್ಲವೆಂದು ಹೇಳಬಹುದು ಬರಹ ಇಲ್ಲದ ಭಾಷೆಗಳಲ್ಲಿಯೂ ಅದು ಜನಪದ ರಾಮಾಯಣವಾಗಿ ಅವತರಿಸಿದೆ ಈ ಕಾವ್ಯ ಜನಮನದಲ್ಲಿ ಆಳವಾಗಿ ಬೇರೂರಿರುವಂಥದು ರಾಷ್ಟ್ರೀಯ ಜೀವನವನ್ನು ತುಂಬಿಕೊಂಡಿರುವಂಥದು ಹಿಂದೂ ಧರ್ಮಕ್ಕೆ ಸೇರದಿರುವ ಮಂದಿಯೂ ಕೂಡ ರಾಮಾಯಣದ ಪ್ರಭಾವದಿಂದ ತಪ್ಪಿಸಿಕೊಳ್ಳುವುದು ಸಾಧ್ಯವಾಗಿಲ್ಲ ಬೌದ್ಧರು, ಜೈನರು ಈ ಕಾವ್ಯದ ಆಕರವನ್ನು ಬಳಸಿಕೊಂಡಿದ್ದಾರೆ ಇವರೆಲ್ಲ ತಂತಮ್ಮ ಜೀವನ ವಿಧಾನ, ದೃಷ್ಟಿಗಳಿಗೆ ಅನುಗುಣವಾಗಿ ಕೃತಿರಚನೆ ಮಾಡಿದ್ದಾರೆ

ವಾಲ್ಮೀಕಿ ರಾಮಾಯಣವು ವಿಶ್ವಮಾನ್ಯಕಾವ್ಯ ಇದರಲ್ಲಿ ವರ್ಣಿತವಾಗಿರುವ ವ್ಯಕ್ತಿಗಳು ಮಾನವತ್ವದಿಂದ ದೇವತ್ವಕ್ಕೆ ಏರಿದವರು ಆದ್ದರಿಂದ ಅವರ ಪ್ರಭಾವವು ದೇಶಕಾಲಾಬಾಧಿತವಾಗಿ ಎಲ್ಲರ ಮೇಲೆಯೂ ಆಗಿದೆ ಈ ಕಾವ್ಯವು ಆಧ್ಯಾತ್ಮಶಾಸ್ತ್ರವೂ ಹೌದು , ಶರಣಾಗತಿಶಾಸ್ತ್ರವೂ ಹೌದು ಧರ್ಮಶಾಸ್ತ್ರವೂ ಹೌದು ಅದು ಅನೇಕ ಆದರ್ಶಗಳ ಗಣಿ ಬಹು ನಿಗೂಢವಾದ ಪಾರಮಾರ್ಥಿಕಾರ್ಥವನ್ನೂ ಅದು ಒಳಗೊಂಡಿದೆ ಪಾರತಂತ್ರವನ್ನು ಪ್ರತಿನಿಧಿಸುವ ಸೀತೆಯೇ ಜೀವ, ಪಂಚಜ್ಞಾನೇಂದ್ರಿಯ ಮತ್ತು ಪಂಚಕರ್ಮೇಂದ್ರಿಯಗಳೆಂಬ ಹತ್ತು ತಲೆಯುಳ್ಳ ಮನಸ್ಸೆಂಬ ರಾವಣನ ಕೈಗೆ ಸಿಕ್ಕಿ ಮನಸ್ಸು ದುರ್ವಿಷಯಗಳ ಕಡೆಗೆ ಧಾವಿಸಿದಾಗ ಈ ಸಂಸಾರ ಸಾಗರದ ಸುಳಿಗೆ ಸಿಕ್ಕಿಕೊಳ್ಳಬೇಕಾಗುವುದು ಶತಯೋಜನ ವಿಸ್ತಾರವುಳ್ಳ ಸಾಗರದ ಸಂಸಾರಸಾಗರ ಇದು ತಿಮಿಂಗಿಲಗಳೆಂಬ ಅನೇಕ ದುಷ್ಟ ಜಲಚರಗಳಿಂದ ಕೂಡಿದೆ ಇದನ್ನು ದಾಟುವುದು ಬಹುಕಷ್ಟ ದೇಹವೆಂಬುದೆ ಲಂಕೆ ಅದರ ಹೃದಯದ ಅಶೋಕವನ ಅಲ್ಲಿ ಸಾತ್ವಿಕತೆಯಿಂದ ಉಪಲಕ್ಷಿತವಾದ ಜೀವ ಬಂಧನದಲ್ಲಿದೆ ಅದಕೆ ಕಾವಲು ದಾರಾಪುತ್ರರೂಪದಲ್ಲಿರುವ ರಾಕ್ಷಸಿಯರು ಅವರೆ ಅರಿಷಡ್ವರ್ಗಗಳು ಇವರ ನಡುವೆ ಸಿಕ್ಕಿಕೊಂಡ ಜೀವ, ಪರಮಾತ್ಮಸ್ವರೂಪನಾದ ಶ್ರೀರಾಮನನ್ನು ಸೇರಲು ಸದಾ ಹಂಬಲಿಸುತ್ತಿರುತ್ತದೆ ಪರಮಾತ್ಮನಾದ ರಾಮನು ಜೀವವನ್ನು ಉದ್ಧಾರಮಾಡಲು ಕಾರುಣ್ಯದಿಂದ ಆಚಾರ್ಯ ಸ್ವರೂಪದ ಆಂಜನೇಯನನ್ನು ಕಳುಹಿಸಿ, ಜೀವವನ್ನು ಬಂಧನದಿಂದ ಬಿಡಿಸಿ ತನ್ನ ಸಾನ್ನಿಧ್ಯ ರೂಪವಾದ ಮೋಕ್ಷವನ್ನು ದಯಪಾಲಿಸುತ್ತಾನೆ ಇದು ರಾಮಾಯಣದ ಅಂತರಾರ್ಥ

ರಾಮಾಯಣವು ಪಿತೃಧರ್ಮ, ಪತಿಧರ್ಮ, ಪತ್ನೀಧರ್ಮ, ಭ್ರಾತೃಧರ್ಮ, ಆಚಾರ್ಯಧರ್ಮ, ಶಿಷ್ಯಧರ್ಮ ಮೊದಲಾದ ಧರ್ಮಗಳ ಕೈಪಿಡಿ ಶ್ರೀರಾಮ ಪರತತ್ತ್ವ, ಸೀತೆ ಅನಪಾಯಿನಿಯಾದ ಮಹಾಲಕ್ಷ್ಮಿ ಇವರಿಬ್ಬರ ಪರಸ್ಪರ ಐಕ್ಯವನ್ನು ರಾಮಾಯಣ ಪ್ರತಿಪಾದಿಸುತ್ತದೆ ಲಕ್ಷ್ಮಣನಿಂದ ಕೈಂಕರ್ಯ ಸ್ವರೂಪವನ್ನೂ ಭರತನಿಂದ ಪಾರತಂತ್ರ್ಯವನ್ನೂ ನಿರೂಪಿಸುತ್ತದೆ ಇವರಿಂದ ಅದು ಮಹಾಶಾಸ್ತ್ರ ಅಷ್ಟೇ ಅಲ್ಲ ರಾಮಾಯಣದ ಒಂದೊಂದು ಕಾಂಡವೂ ಒಂದೊಂದು ರೀತಿಯ ಶರಣಾಗತಿಯ ಪ್ರಸಂಗ ಇದು ಶರಣಾಗತಿಯ ಪರಮ ವೈಭವವನ್ನು ವೃವೀಕರಿಸುತ್ತದೆ

ವಾಲ್ಮೀಕಿ ರಾಮಾಯಣವು ರಾಮನನ್ನು ಆದರ್ಶವ್ಯಕ್ತಿತ್ವವುಳ್ಳ ಮಾನವಶ್ರೇಷ್ಠನನ್ನಾಗಿಯೂ ರಾವಣನನ್ನು ದುಷ್ಟತಮ ರಾಕ್ಷಸನನ್ನಾಗಿಯೂ ಚಿತ್ರಿಸಿದೆ ವಾಲ್ಮೀಕಿ, ನಾರದ ದಶರಥ, ಅಯೋಧ್ಯೆಯ ಪ್ರಜೆಗಳು, ಋಷಿವರ್ಗ ಸುಗ್ರೀವ, ಆಂಜನೇಯ ಅಷ್ಟೇ ಅಲ್ಲ ಅವರ ಶತ್ರುಪಕ್ಷದವರಾದ ಶೂರ್ಪನಖಿ, ಮಾರೀಚ, ವಿಭೀಷಣ ಕೂಡ ಸಂದರ್ಭಾನುಸಾರ ರಾಮನನ್ನು ಮನಃಪೂರ್ವಕವಾಗಿ ಹೊಗಳುವರು ಇಂಥ ಒಳ್ಳೆಯ ಗುಣಶಾಲಿಯಾದರೂ ಮಾನವಸಹಜವಾದ ದೌರ್ಬಲ್ಯ ಅವನಲ್ಲಿ ಇದ್ದೇ ಇದೆ ಮನಸ್ಸು ತುಂಬಾ ರೋಸಿಹೋಗಿ ಭ್ರಾಂತಿಯುಂಟಾದಾಗ ಎಡವುವ ಸನ್ನಿವೇಶಗಳೂ ಉಂಟು ಆದರೂ ಲಕ್ಷ್ಮಣನ ಸೂಕ್ತ ವಾಕ್ಯಗಳಿಂದ ಜಿತೇಂದ್ರಿಯನಾಗಿ ಸಹನ, ವಿವೆ ಕಗ



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ ಪರಂಪರೆ ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು ಮಾನವ ಶಾಸ್ತ್ರ ಪ್ರಾಕ್ ವಸ್ತುಗಳನ್ನೂ ನೆಲ ಸಸ್ಯಗಳ ಬಗೆಗಳನ್ನೂ ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ ಶಿಲ್ಪಗಳೂ ಲೋಹ ವಿಗ್ರಹಗಳೂ ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ

ವೈಷ್ಣವತೆಯ ಉಗಮ ವಿಕಾಸ ವಾಸುದೇವ ವೃಷ್ಣಿಕುಂಜ ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉಪಶಾಖೆಗಳಾಗಿ ಭಾರತದಲ್ಲೆಲ್ಲ ಹರಡಿದೆ ದಕ್ಷಿಣ ಭಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ಪಾಂಚರಾತ್ರಾಗಮಗಳಿಂದ ವಿಶೇಷ ಪ್ರಭಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ ೧೧ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗುಲಾಪುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ ಭೂಶುದ್ಧಿ ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದು ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಗಲಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ ಭಂಗಿಗಳೂ ಆಭರಣಗಳೂ ಪ್ರಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರವರ್ತ್ತ ಮಾರ್ಗಕೆ ಆಳ್ವಾರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ದರ್ಶದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೯೮ ಅರುಪಂಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ ಭರತನಾಟ್ಯ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು ಶಕ್ತಿ ಷಣ್ಮುಖ ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

**ಪರಂಪರೆಯ ಪರಿಚಯ ಹೊಂದಿರಿ ಒಮ್ಮೆ ಭೇಟಿ ನೀಡಿರಿ**

---

**ಕಾಲ ಬೆಳಗ್ಗೆ ೮ ರಿಂದ**
**ರಾತ್ರಿ ೮**

**ಟಿಕೆಟ್ ರೂ ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

ಳನ್ನು ತಂದುಕೊಳ್ಳುವನು ಅದೇ ಅವನ ಆದರ್ಶ ನಡತೆ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಆಗದೇಕಾದ್ದು ಅದೇ ತಂದೆಯು ಅಭಿಷೇಕ ಮಾಡುವನೆಂದು ಹೇಳಿದಾಗ ರಾಮನು ಹಿಗ್ಗಲಿಲ್ಲ ಕೈಕೆಯಿಂದ ಅದು ತಪ್ಪಿ ವನವಾಸಕ್ಕೆ ಹೋಗಬೇಕೆಂದಾಗ ಅವನು ಕುಗ್ಗಲಿಲ್ಲ ಅವನ ಜಿತೇಂದ್ರಿಯ ಮನ ಪ್ರವೃತ್ತಿ, ಅವನ ಮನಸ್ಸು ವಿಚಲಿತವಾಗಲು ಅವಕಾಶಕೊಡಲಿಲ್ಲ ಆದರೂ ಕಾಡಿನಲ್ಲಿ ವಿರಾದನು ಸೀತೆಯನ್ನು ಸೆಳೆದಾಗ ಉಂಟಾದ ಉದ್ವೇಗವನ್ನು ಅವನು ತಡೆಯಲಾಗಲಿಲ್ಲ ಆಗ ಲಕ್ಷ್ಮಣನ ಮಾತುಗಳಿಂದ ಸಮಾದಾನ ತಾಳುವನು ಲಕ್ಷ್ಮಣರು ಕೈಕೆಯನ್ನು ದೂಷಿಸಿದಾಗ ರಾಮನು ಅದನ್ನು ಸಹಿಸದೆ ಲಕ್ಷ್ಮಣನಿಗೆ ವಿವೇಕ ಹೇಳುವನು

ರಾಮನ ದಾಂಪತ್ಯಜೀವನ ಅಸ್ವಾದೃಶವಾದುದು ವಾಲ್ಮೀಕಿಯು ಇದನ್ನು ಹಲವಾರು ಸಂದರ್ಭಗಳಲ್ಲಿ ಬಹು ಧ್ವನಿಯುಕ್ತವಾಗಿ ವರ್ಣಿಸಿದ್ದಾನೆ ಮಡದಿ ಸೀತೆಯನ್ನು ರಾವಣ ಅಪಹರಿಸಿದ ಬಳಿಕ ರಾಮನಿಗೆ ಉಂಟಾಗುವ ವಿರಹವೇದನೆಯನ್ನು ಕವಿ ವಾಚ್ಯವಾಗಿಯೇ ವರ್ಣಿಸಿದ್ದಾನೆ ಸೀತೆ ಸಿಗದೆ ಹೋದರೆ ಮೂರು ಲೋಕವನ್ನೇ ಬೂದಿಮಾಡುತ್ತೇನೆ ಎನ್ನುತ್ತಾನೆ ರಾಮ ತಕ್ಷಣವೇ ತಮ್ಮ ಲಕ್ಷ್ಮಣನ ಮಾತುಗಳಿಂದ ಸ್ವಸ್ಥಚಿತ್ತನಾಗುತ್ತಾನೆ ಇಂದ ಗುಣವಿದ್ದ ರಾಮ, ರಾವಣವಧೆಯಾದ ಬಳಿಕ ಸಾಧ್ವಿಮಣಿಯಾದ ಸೀತೆಯನ್ನು ಅಗ್ನಿಪರೀಕ್ಷೆಗೆ ಗುರಿಮಾಡುತ್ತಾನೆ! ಹೀಗೆ ವಾಲ್ಮೀಕಿಯ ಶ್ರೀರಾಮನ ಪಾತ್ರವನ್ನು ಅವಲೋಕಿಸಿದಾಗ 'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ' ಎಂಬ ವಾಕ ನೆನಪಾಗುತ್ತವೆ

ಶ್ರೀರಾಮನು ಸದಾ ಪ್ರಶಾಂತನು, ಪೂರ್ವಬಾವಿಯಾಗಿಯೆ ಮೃದುವಾಗಿ ಮಾತನಾಡುವವನು ಯಾರಾದರೂ ಕಠಿಣವಾಗಿ ಮಾತನಾಡಿದರೆ ಅದಕ್ಕೆ ಪ್ರತಿಯಾಗಿ ಮಾತನಾಡುವವನಲ್ಲ ಎಂದಾದರೂ ಮಾಡಿದ ಒಂದು ಉಪಕಾರದಿಂದಲೇ ಅವನು ತುಷ್ಟ, ಇತರರು ನೂರು ಅಪಕಾರಗಳನ್ನು ಮಾಡಿದರೂ ಆತ್ಮವಂತನಾದ ಅವನು ಸ್ಮರಿಸುತ್ತಿರಲಿಲ್ಲ ರಾಮನು ಲೌಕಿಕದಲ್ಲಿ ಸಮಯಾಚಾರದಲ್ಲಿ ವಿಶಾರದನು, ಕೃತಜ್ಞನು, ಆಲಸ್ಯವಿಲ್ಲದವನು ಜಾಗರೂಕನು ತನ್ನ ದೋಷವನ್ನೂ ಪರರ ದೋಷವನ್ನೂ ಚೆನ್ನಾಗಿ ತಿಳಿದವನು ಎಂಬುದು ವಾಲ್ಮೀಕಿಯ ಮಾತು

ವಾಲ್ಮೀಕಿ ರಾಮಾಯಣದ ತರುವಾಯ ಅದರ ಕತೆಯನ್ನು ಬೇರೆಬೇರೆ ಧರ್ಮಪಂಥದವರು ತಮ್ಮ ಧರ್ಮಪ್ರಕ್ರಿಯೆಗಳಿಗೆ ಅನುಗುಣವಾಗಿ ಬದಲಾಯಿಸಿಕೊಂಡು ಬೇರೆಬೇರೆ ಕೃತಿಗಳನ್ನು ರಚಿಸಿದರು ಇಂದವರ ಪೈಕಿ ಮೊದಲು ವಿಚಾರಣೀಯರಾದವರೆಂದರೆ ಬೌದ್ಧರು ಬೌದ್ಧರಾಮಾಯಣಗಳಲ್ಲಿ ಅವರ ಮತ ಹೆಚ್ಚು ಪ್ರಭಾವ ಬೀರಿದೆ ಬೌದ್ಧರ ಜಾತಕಕತೆಗಳಲ್ಲಿ 'ದಶರಥಜಾತಕ' ಎಂಬುದು ಪ್ರಮುಖವಾದುದು ಇದರಲ್ಲಿ ರಾಮಾಯಣದ ಕತೆ ಸಿಗುತ್ತದೆ ಇದರಲ್ಲಿ ರಾವಣನ ಪ್ರಸ್ತಾಪ ಒರುವುದಿಲ್ಲ ಸೀತಾಪಹರಣವೂ ಅದರ ಮುಂದಿನ ಕದೆಯೂ ಇಲ್ಲ ರಾಮಲಕ್ಷ್ಮಣ ಸೀತೆಯರು ಅಣ್ಣ ತಂಗಿಯರು ಒಬ್ಬ ತಾಯಿಯ ಮಕ್ಕಳು ದಶರಥನ ಹದಿನಾರು ಸಾವಿರ ಹೆಂಡತಿಯರ ಪೈಕಿ ಪ್ರಧಾನಳಾದ ಯಾವಳೊ ಒಬ್ಬಳು ರಾಣಿಯ ಮಗ ಭರತ ಆ ರಾಣಿಗೆ ದಶರಥನು ಒಂದು ವರವನ್ನು ಕರುಣಿಸಿದ್ದನು ರಾಮನಿಗೆ ಪಟ್ಟಾಭಿಷೇಕವಾಗುವ ಸಂದರ್ಭದಲ್ಲಿ ಆ ವರವು ಅಡ್ಡವಾಗಿ ಬಂದು ಪಟ್ಟಾಭಿಷೇಕ ತಪ್ಪಿಹೋಗಿ ರಾಮಲಕ್ಷ್ಮಣಸೀತೆ ಕಾಡಿಗೆ ಹೋಗಬೇಕಾಯಿತು ಅನಂತರ ದಶರಥ ಸಾವನ್ನಪ್ಪುವನು ಭರತನು ರಾಮನ ಬಳಿ ಬಂದು ರಾಜ್ಯವನ್ನು ಮತ್ತೆ ಸ್ವೀಕರಿಸಬೇಕೆಂದು ಕೇಳಿಕೊಳ್ಳುವನು ಆದರೆ ಅವಧಿ ಮುಗಿಯುವ ತನಕ ರಾಮನು ಹಿಂದಿರುಗುವುದಿಲ್ಲ ವನವಾಸ ಮುಗಿದ ಬಳಿಕ ಮರಳಿ ಬಂದು ಸೀತೆಯನ್ನು ಮದುವೆ ಮಾಡಿಕೊಂಡು ಸುಖವಾಗಿ ರಾಜ್ಯಬಾರ ಮಾಡತೊಡಗುವನು ಈ ಕತೆಯಲ್ಲಿ ರಾಮನು ಸತ್ವಗುಣ ಪ್ರದಾನವಾಗಿ ಭಗವಾನ್ ಬುದ್ಧನಿಗೆ ಸರಿಸಾಟಿಯಾದ ವ್ಯಕ್ತಿ, ಪರಮಸಾಧು ವೈರಾಗ್ಯನಿಧಿ ಧರ್ಮಮೂರ್ತಿಯಾದ ರಾಮನನ್ನು ಬೌದ್ಧರು ತಮ್ಮವನನ್ನಾಗಿ ಮಾಡಿಕೊಂಡಿದ್ದಾರ ಅಲ್ಲದೆ ಬುದ್ಧನ ಹಿಂದಿನ ಜನ್ಮ

# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಸ್ವಲ್ಪವೇ ಸಂಪದವನ್ನು ನೀಡಿರಿ ದೈವಿಕ ಫಲವನ್ನು ಪಡೆಯಿರಿ

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ

೧ ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್ ಮಂಗಳಭಾವಿ ಶಂಕುಮಿಟ್ಟ ಶೇಷಾದ್ರಿನಗರ ಅಂಜನಾದ್ರಿನಗರ ಗರುಡಾದ್ರಿನಗರ ಕಾಟೇಜುಗಳಲ್ಲಿ (ಸಿ ಹಾಗೂ ಡಿ ಭಾಗಗಳ) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಭಾಗಗಳ ಮೇಲೆ) ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ ಸಿ ಎಂ ಬಿ ಸಿ ಎಸ್ ಎಂ ಸಿ ಎಸ್ ಎನ್ ಸಿ ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ ದಾನಿಗಳಿಗೆ ನೀಡಲಾಗಿದೆ ಎ ಎನ್ ಸಿ ಜಿ ಎನ್ ಸಿ ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು ಚಕ್ರ ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳ ಮೇಲೆ ಸಿ ಹಾಗೂ ಡಿ ಭಾಗಗಳ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೦೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ ಟ್ರಸ್ಟ್ ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

೨ ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ ೩ರಲ್ಲಿನ ೧೫೦ ಸೂಟ್‌ಗಳ ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪೫ ಚದರಮೀಟರ್ ಆಗಿದ್ದು (ಸ್ನಾನ ಶೌಚ ಗೃಹಗಳೊಡನೆ) ಸಾಮಾನ್ಯ ಅಂಗಳವಿದೆ

ರೂ ೬೦೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

೩ ಸಪ್ತಗಿರಿ ಸತ್ರಗಳು

ಒಂದ ಕೇಂದ್ರ ವಿಭಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ನೇ ವಿಭಾಗಗಳ ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲಿ ಒಂದೊಂದು ವಿಭಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳ ... ಂದ ೮ (ಒಟ್ಟು ೭ ವಿಭಾಗ) ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾತ್ರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮+೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ)೧೨+೧೪ ರೂ ೩೦೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಒಳಿಕ ಇದನ್ನು ನೀಡಲಾಗುವುದು

೪ ಶೇಷಾದ್ರಿನಗರ ಅತಿಥಿಗೃಹ2

ನೆಲಅಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳ) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪_m x ೪೨m ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಿಗಳಿಗೆ ಅರ್ಹತೆ ನೀಡಲಾಗುವುದು

... ಲಕ್ಷ ರೂಗಳ ದಾನದಿಂದ ವ್ಯಕ್ತಿ ವ್ಯಕ್ತಿಗಳ ಸಂಸ್ಥೆ ಕಂಪನಿ ಟ್ರಸ್ಟ್ ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

... ಸೌಲಭ್ಯಗಳು ದಾನಿಗಳ ತಮ್ಮ ಜೀವನಾವಧಿಯಲ್ಲೂ ಕಂಪನಿ ಇತ್ಯಾದಿಗಳ ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು ಸೂಟು ಕೋಣೆಗಳಲ್ಲಿ ನಾಮಮಾತ್ರ ಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ ಸೂಟ್‌ಗಳಲ್ಲಿ ಪ್ರದರ್ಶಿಸಲಾಗುವುದು

ಮಿಕ್ಕವಿವರಗಳಿಗಾಗಿ ಕೂಡಲೇ ಬರೆಯಿರಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ

******

ಗಳ ಪೆ ರಾಮನನೂ ಒಂದೆಂದು ಪರಿಗಣಿಸಿದ್ದಾರೆ

ಜೈನರೂ ರಾಮಾಯಣವನ್ನು ತಮ್ಮ ಮತ ಧರ್ಮಕ್ಕೆ ಅನುಸಾರವಾಗಿ ಮಾರ್ಪಡಿಸಿಕೊಂಡಿದ್ದಾರೆ ಜೈನ ರಾಮಾಯಣಗಳಲ್ಲಿ ರಾಮನ ಪೂರ್ವಭವ ಮತ್ತು ಪುನರ್ಭವಗಳ ದೃಷ್ಟಿಯಿಂದ ಕತೆಯನ್ನು ವಿಶೇಷವಾಗಿ ವಿಸ್ತರಿಸಲಾಗಿದೆ ಈ ಕತೆಯನ್ನು 'ತ್ರಿಷಷ್ಠಿ ಶಲಾಕಾಪುರುಷ ಚರಿತ್ರೆ' ಯಲ್ಲಿ ಅಳವಡಿಸಿಕೊಳ್ಳಲಾಗಿದೆ ರಾಮಲಕ್ಷ್ಮಣರೂ ರಾವಣನೂ ಶಲಾಕಾಪುರುಷರಲ್ಲಿ ಪುರಾಣಪುರುಷರಾಗಿದ್ದಾರೆ ಎಂಟನೆಯ ಬಲದೇವ, ವಾಸುದೇವ, ಪ್ರತಿವಾಸುದೇವರಾಗಿ ಅವತರಿಸಿದ್ದಾರೆ ಆಧ್ಯಾತ್ಮಿಕ ಪ್ರಪಂಚದಲ್ಲಿ ಅದ್ಭುತ ಉತ್ಕ್ರಾಂತಿಯನ್ನು ಸಾಧಿಸಿದ ಮಹಾಪುರುಷರಾಗಿ ಚಿತ್ರಿತರಾಗಿದ್ದಾರೆ ಈ ರಾಮಾಯಣಗಳು ಭಾರತೀಯ ಸಂಸ್ಕೃತಿಯ ಮತ್ತೊಂದು ಮುಖವನ್ನು ತೋರಿಸಿಕೊಡುತ್ತವೆ

ಜೈನರಾಮಾಯಣಗಳ ರಾಮ ಬಲದೇವನಾಗಿದ್ದಾನೆ ಅವನು ಬಲಭದ್ರನೂ ಹೌದು ಲಕ್ಷ್ಮಣನು ವಾಸುದೇವ ಇವರಿಬ್ಬರೂ ಬೇರೆ ಬೇರೆ ತಾಯಿಂದಿರ ಮಕ್ಕಳು ಲಕ್ಷ್ಮಣನು ರಾಮನ ಸಹಾಯದಿಂದ ಪ್ರತಿವಾಸುದೇವನಾದ ರಾವಣನನ್ನು ಸಂಹರಿಸುವನು ಇದಾದ ಬಳಿಕ ದಿಗ್ವಿಜಯಕ್ಕೆ ಹೊರಟು ಭರತಭೂಮಿಯ ಮೂರು ಖಂಡಗಳನ್ನೂ ವಶಪಡಿಸಿಕೊಳ್ಳುತ್ತಾನೆ ಅವುಗಳ ಅಧಿಪತ್ಯ ಪಡೆದು ಚಕ್ರವರ್ತಿಯೆನಿಸಿಕೊಳ್ಳುತ್ತಾನೆ ಮರಣಾನಂತರ ಲಕ್ಷ್ಮಣನಿಗೆ ರಾವಣವಧೆಯ ಫಲವಾಗಿ ನರಕ ಪ್ರಾಪ್ತಿಯಾಗುತ್ತದೆ ಲಕ್ಷ್ಮಣನ ಮರಣದಿಂದ ದು ಖಿತನಾದ ರಾಮನು ಜಿನದೀಕ್ಷೆಯನ್ನು ಸ್ವೀಕರಿಸಿ ಮೋಕ್ಷವನ್ನು ಹೊಂದುತ್ತಾನೆ ಹೀಗೆ ಅಹಿಂಸೆಯನ್ನು ಮುಖ್ಯವಾಗಿ ಪ್ರತಿಪಾದಿಸುವ ಜೈನಧರ್ಮದ ನೆಲೆಗಟ್ಟಿನ ಮೇಲೆ ಶ್ರೀ ರಾಮನ ಪಾತ್ರ ಸೃಷ್ಟಿಯಾಗಿದೆ

ತಮಿಳಿನ ಕಂಬ ರಾಮಾಯಣಕ್ಕೆ ವಾಲ್ಮೀಕಿ ರಾಮಾಯಣವೆ ಮೂಲ ಅದನ್ನೇ ಬಹು ಮಟ್ಟಿಗೆ ಅನುಸರಿಸಿದ್ದಾರೆ ಕಂಬರ್ ಚಿತ್ರಿಸಿರುವ ಶ್ರೀರಾಮನು ಸಕಲಶ್ರೇಷ್ಠಗುಣಗಳುಳ್ಳ ಆದರ್ಶ ಧೀರೋದಾತ್ತ ನಾಯಕ ಅವನು ಧರ್ಮಜ್ಞ, ಸತ್ಯಸಂಧ, ಕೃತಜ್ಞ, ಶುದ್ಧಚರಿತ್ರ, ಸ್ಫುರದ್ರೂಪಿ ಆದರ್ಶ ಪುರುಷ, ವೀರ್ಯವಂತ, ಮರ್ಯಾದಾ ಪುರುಷೋತ್ತಮ ಕುಲಶೇಖರಾಳ್ವಾರರು ತಮ್ಮ ಪ್ರಬಂಧಗಳಲ್ಲಿ ಶ್ರೀ ಮನ್ನಾರಾಯಣನೇ ಮನುಷ್ಯ ರೂಪದಲ್ಲಿ ಶ್ರೀ ರಾಮನಾಗಿ ಭೂಮಿಗಿಳಿದು ಬಂದಿದ್ದಾನೆ ಎಂಬುದಾಗಿ ಹಾಡಿದ್ದಾರೆ ಶ್ರೀ ರಾಮನು ಭಗವಂತನ ಅವತಾರವಾಗಿದ್ದರೂ ಅವನು ಮನುಷ್ಯರಂತೆ ವರ್ತಿಸುತ್ತಾನೆ ಗುಹನ ಸರಳವಾದ ಭಕ್ತಿಗೆ ಮಾರುಹೋಗಿ ಅವನನ್ನು ತನ್ನ ಸೋದರನೆಂದು ಭಾವಿಸುತ್ತಾನೆ ದಶರಥನ ಮರಣದ ಸುದ್ದಿಯನ್ನು ತಿಳಿದು ಬಹಳ ಸಂಕಟಪಡುತ್ತಾನೆ ಇಂದ್ರಜಿತುವಿನೊಂದಿಗೆ ಯುದ್ಧಮಾಡುವಾಗ ಲಕ್ಷ್ಮಣನು ಮೂರ್ಛೆಹೋದಾಗ ಹಾಗೂ ಇಂದ್ರಜಿತ್ ಸೀತೆಯನ್ನು ಸಂಹರಿಸಿದನೆಂಬ ಸುದ್ದಿಯನ್ನು ಕೇಳಿದಾಗ ದು ಖದಿಂದ ವಿಹ್ವಲನಾಗುವನು ಈ ರೀತಿಯಾಗಿ ದೈವತ್ವ ಮತ್ತು ಮನುಷ್ಯತ್ವಗಳ ಸಮ್ಮಿಳನವು ಕಂಬರ ಕಾವ್ಯದಲ್ಲಿ ಪರಸ್ಪರ ಪೂರಕವಾಗಿದೆ ಅಸ್ವಾಭಾವಿಕತೆ ತರವೇ ಇರುವುದಿಲ್ಲ

ತನಗೆ ಪಟ್ಟಾಭಿಷೇಕವಾಗುತ್ತದೆಂದು ತಿಳಿದಾಗ ರಾಮನಿಗೆ ತಿ ರ ಸಂತೋಷವೇನೂ ಆಗುವುದಿಲ್ಲ ಅವನು ಉತ್ಸಾಹದಿಂದ ಹಿಗ್ಗುವುದಿಲ್ಲ ಪೂಜ್ಯ ತಂದೆಯ ಆಜ್ಞೆಯಂತೆ ತಾನು ನಡೆದುಕೊಳ್ಳುವುದು ತನ್ನ ಆದ್ಯ ಕರ್ತವ್ಯವೆಂದು ಒಪ್ಪಿಕೊಳ್ಳುವನು ಅನಂತರ ಮುಂದೆ ಕೈಕೆಗೆ ಉತ್ತರಕೊಡುವ ತನ್ನ ಒಂದು ಮಾತನ್ನೂ ಆಡುವುದಿಲ್ಲ ಅವನ ವಿರಕ್ತಭಾವವನ್ನು ಕಂಬರ್ ಚೆನ್ನಾಗಿ ಚಿತ್ರಿಸಿದ್ದಾರೆ ತನ್ನ ಸ್ವಂತ ವಿಚಾರಗಳಲ್ಲಿ ಶ್ರೀ ರಾಮನು ವಿರಕ್ತನಾಗಿದ್ದರೂ ಇತರರ ದು ಖ ಕಷ್ಟಗಳಿಂದ ಅವನ ಹೃದಯ ಮೃದುವಾಗಿ ಮರುಗುತ್ತದೆ ಯುದ್ಧದಲ್ಲಿ ಲಕ್ಷ್ಮಣನು ಮೂರ್ಛೆ ಹೋದಾಗ ಅವನ ದೇಹವನ್ನು ಎತ್ತಿ ತಬ್ಬಿಕೊಂಡು ಮುದ್ದಿಸಿ 'ಲಕ್ಷ್ಮಣಾ ಯಾವ ವ್ಯಕ್ತಿಯಾದರೂ ನನ್ನಂತೆ ದು ಖಿತನಾಗಿದ್ದಾನೆಯೆ ?' ಎಂದು ಪ್ರಲಾಪಿಸುತ್ತಾನೆ ಮಾಯಾಸೀತೆಯ ವಧೆಯ ಸುದ್ದಿ ಕೇಳಿದಾಗ ಮೂರ್ಛಿತನಾಗಿ ಬಳಿಕ ಎಚ್ಚೆತ್ತು ನನಗೆ ಕೊಟ್ಟ ಗೃಹವು ನಾಶಗೊಂಡಿತು ಇನ್ನೇನು ಉಳಿದಿದೆ? ಎಂದು ದು ಖ

ಸುತ್ತಾನ ರಾಮನ ಶೌರ್ಯಕ್ಕಿಂತ ಅವನ ಔದಾರ್ಯವು ದೊಡ್ಡದು ರಾವಣನು ರಣರಂಗದಲ್ಲಿ ಮಡಿದುಬಿದ್ದಾಗ ವಿಭೀಷಣನನ್ನು ಕರೆದು 'ರಾವಣನ ದುಷ್ಟತನ ನಮ್ಮ ಮನಸ್ಸನ್ನು ನೋಯಿಸಿದ್ದರೂ ಅವನನ್ನು ಕ್ಷಮಿಸೋಣ ಅವನಿಗೆ ಯೋಗ್ಯರೀತಿಯ ಶವಸಂಸ್ಕಾರವನ್ನು ಮಾಡು' ಎನ್ನುತ್ತಾನೆ ಈ ಔದಾರ್ಯವೇ ಅವನನ್ನು ಶರಣಾಗತವತ್ಸಲನನ್ನಾಗಿ ಮಾಡಿದೆ

ಹಿಂದಿಯಲ್ಲಿ ತುಳಸೀದಾಸರ 'ರಾಮಚರಿತಮಾನಸ ಒಂದು ಸುಂದರ ಮಹಾಕಾವ್ಯ ಅದೊಂದು ಮಾನಸಸರೋವರ ವಾಲ್ಮೀಕಿ ರಾಮಾಯಣ ಮತ್ತು ಆದ್ಯಾತ್ಮರಾಮಾಯಣಗಳಿಂದ ಕದಾವಸ್ತುವನ್ನು ಸಂಗ್ರಹಿಸಿ ಈ ಮಹಾಕಾವ್ಯವನ್ನು ಸೃಷ್ಟಿಸಲಾಗಿದೆ ಹಿಂದಿ ಸಾಹಿತ್ಯದಲ್ಲೇ ರಾಮಚರಿತಮಾನಸ ಅತ್ಯಂತ ಜನಪ್ರಿಯ ಕಾವ್ಯವೆಂದು ಹೆಸರಾಗಿದೆ ರಾಮಕದೆಯ ವಿಶಾಲವಾದ ದೀರ್ಘಪರಂಪರೆಯಲ್ಲಿ ಈ ಕಾವ್ಯದ ಸ್ಥಾನಮಾನಗಳು ಹೆಚ್ಚಿನವು ತುಳಸೀದಾಸರು ರಾಮಕದೆಯ ಮೂಲಕ ಭಾರತೀಯ ಸಂಸ್ಕೃತಿಯನ್ನು ದಾರ್ಮಿಕ, ಸಾಮಾಜಿಕ ನಿಟ್ಟಿನಿಂದ ವಿವೇಚಿಸುವ ಪ್ರಯತ್ನ ಮಾಡಿದ್ದಾರೆ ವಾಲ್ಮೀಕಿ ರಾಮಾಯಣದಲ್ಲಿ ದೊರೆಯದ ಅನೇಕ ಸಂಗತಿಗಳು ರಾಮಚರಿತಮಾನಸದಲ್ಲಿ ಸಿಕ್ಕುವುದರಿಂದ ಶ್ರೀರಾಮನ ಕಥೆಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತಿದೆ ರಾಮಾವತಾರದ ಹಿನ್ನೆಲೆ, ಗರುಡ ಕಾಕಭುಶುಂಡಿ ಸಂವಾದ ಮೊದಲಾದವು ಕಾವ್ಯಕ್ಕೆ ವೈಶಿಷ್ಟ್ಯ ತಂದುಕೊಟ್ಟಿವೆ ಅಲ್ಲದೆ ಶಿಬಿ, ದಧೀಚಿ, ಬಲಿ, ಹರಿಶ್ಚಂದ್ರ, ನಹುಷ, ಪರಶುರಾಮ, ಗಾಲವ, ಸಗರ, ಯಯಾತಿ, ರಂತಿದೇವ, ಶಬರಿ, ಅಜಾಮಿಳ ಮೊದಲಾದವರನ್ನು ಕುರಿತ ಕತೆಗಳು ತುಳಸೀರಾಮಾಯಣವನ್ನು ವಿಸ್ತಾರಗೊಳಿಸಿವೆ

ರಾಮಚರಿತಮಾನಸದಲ್ಲಿ ಘಟನೆಗಳ ಸಂವಿಧಾನಕ್ಕಿಂತ ಪಾತ್ರ ನಿರೂಪಣೆಗೇ ಪ್ರಾಶಸ್ತ್ಯ ಇಲ್ಲಿಯ ಪಾತ್ರಗಳಲ್ಲಿ ಲೋಕಕಲ್ಯಾಣದ ಭಾವನೆ ಅಭಿವ್ಯಕ್ತವಾಗುತ್ತದೆ ಮಾತಾಪಿತೃಪ್ರೇಮ, ಸೋದರಪ್ರೇಮ, ಪ್ರಜಾಪ್ರೀತಿ, ಸತ್ಯಧರ್ಮ ನಿಷ್ಠೆಗಳು, ಸ್ವಾಮಿಭಕ್ತಿ, ಗುರುಭಕ್ತಿ, ತ್ಯಾಗ, ದಯೆ, ಪಾತಿವ್ರತ್ಯ ಸಜ್ಜನಸೇವೆ, ಈಶ್ವರಭಕ್ತಿ ಇವೇ ಮೊದಲಾದ ಗುಣಗಳಿಂದ ಕಾವ್ಯದಪಾತ್ರಗಳು ಉತ್ತಮ ಮಾರ್ಗದರ್ಶಕಗಳಾಗಿವೆ

ತುಳಸೀದಾಸರ ರಾಮ ನಿರ್ಗುಣ, ನಿರಾಕಾರ ಪರಬ್ರಹ್ಮ ಅರೂಪ, ಅನಾಮ, ಅಜ, ಸಚ್ಚಿದಾನಂದ, ವಿಶ್ವವ್ಯಾಪಕ ರಾಮನು ನಿರ್ಗುಣನೂ ಹೌದು , ಸಗುಣನೂ ಹೌದು ಆದರೆ ತುಳಸೀದಾಸರಿಗೆ ಸಗುಣರಾಮನೇ ಪ್ರಿಯನಾದವನು ಪರಮಾತ್ಮನ ಅವತಾರದಲ್ಲಿ ತುಳಸೀದಾಸರಿಗೆ ಅಪಾರ ನಂಬಿಕೆ ದಶರಥಪುತ್ರನಾದ ರಾಮನೇ ಪರಮಾತ್ಮ ಪರಬ್ರಹ್ಮ ರಾಮನು ಮಾನವನಲ್ಲ ಈಶ್ವರ ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ ಸೀತೆಯು ಆದಿನಾರಾಯಣ ರಾಮನ ಯೋಗಮಾಯೆ ಅದವಾ ಮೂಲಪ್ರಕೃತಿ ರಾಮ ಮತ್ತು ಸೀತೆ ಬೇರೆಬೇರೆಯಲ್ಲ ಮಾಯೆಯು ರಾಮನ ದಾಸ ರಾಮ ಅದರ ಒಡೆಯ ಆದ್ದರಿಂದಲೇ ರಾಮನು ಮಾಯಾಪತಿ ಭಕ್ತಿಪ್ರಿಯ ಮಾಯೆಯಾದರೋ ನರ್ತಕಿಯಲ್ಲವೇ ಎಂದಿದ್ದಾರೆ ತುಳಸೀದಾಸರು ಸೇವಕ ಸೇವ್ಯ ಭಾವವಿಲ್ಲದೆ ಭವಸಾಗರವನ್ನು ದಾಟುವುದು ಸಾದ್ಯವಿಲ್ಲವೆಂಬುದು ತುಳಸೀದಾಸರ ಸಿದ್ಧಾಂತ

ತಮ್ಮ ಕಾವ್ಯದಲ್ಲಿ ತುಳಸೀದಾಸರು, ರಾಮನನ್ನು ಶಿವನ ಭಕ್ತನನ್ನಾಗಿಯೂ ಶಿವನನ್ನು ರಾಮನ ಅನನ್ಯ ಉಪಾಸಕನನ್ನಾಗಿಯೂ ಚಿತ್ರಿಸಿದ್ದಾರೆ ರಾಮಚರಿತಮಾನಸದಲ್ಲಿ ರಾಮಕದೆ ಹೇಳುವವರು ಶಿವ, ಯಾಜ್ಞವಲ್ಕ್ಯ ಮತ್ತು ಕಾಕಭುಶುಂಡಿ, ಶ್ರೋತೃಗಳೆಂದರೆ ಪಾರ್ವತಿ, ಭರದ್ವಾಜ ಮತ್ತು ಗರುಡ ಬಾಲಕಾಂಡದಲ್ಲಿ ಸತೀ ಕದೆಯ ಮೂಲಕ ಶಿವಭಕ್ತಿಯನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ ಅಂತೆಯೇ ಲಂಕಾಕಾಂಡದಲ್ಲಿ ಸಮುದ್ರದ ಮೇಲೆ ಸೇತುಬಂಧನದ ಸಂದರ್ಭದಲ್ಲಿ ರಾಮನು ಶಿವಲಿಂಗವನ್ನು ಪ್ರತಿಷ್ಠಾಪಿಸಿ ಅದನ್ನು ವಿಧಿಪೂರ್ವಕವಾಗಿ ಭಕ್ತಿಯಿಂದ ಪೂಜಿಸುವ ಸನ್ನಿವೇಶ ತಂದಿದ್ದಾರೆ ತುಳಸೀದಾಸರ ರಾಮ ಸರ್ವಶ್ರೇಷ್ಠ ಲೋಕೋತ್ತರ ಗುಣಗಳಿಂದ ಕೂಡಿದ ಆದರ್ಶವ್ಯಕ್ತಿ ಎಲ್ಲ ಉದಾತ್ತ ಗುಣಗಳ ಪ್ರತಿಮೂರ್ತಿ ರಾಮನ ಶರೀರಸೌಂದರ್ಯ, ಕೇವಲ ಸೌಂದರ್ಯವಲ್ಲ ಅದು ಅವನ ನಿರ್ಮಲ ಹೃದಯದಲ್ಲಿ ಇರುವ ಪವಿತ್ರಪ್ರೇಮದ ಪ್ರತಿಛಾಯೆ ರಾಮನು ಎಷ್ಟು ವಿನಯಶೀಲನೋ ಅಷ್ಟೇ ಧೈರ್ಯಶಾಲಿ, ಸಾಹಸಿ, ವೀರ ಎಂದ ಕಠಿಣ ಪ್ರಸಂಗಗಳಲ್ಲೂ ಅವನ ಮನಸ್ಸು ಚಂಚಲಗೊಳ್ಳುವುದಿಲ್ಲ ಅವನು ದರ್ಮವನ್ನು ಬಿಟ್ಟು ಅದರ್ಮದ ಮಾರ್ಗದಲ್ಲಿ ಕಾಲಿಡುವುದಿಲ್ಲ ರಾಮನ ಬದುಕಿನಲ್ಲಿ ಕಾಣಿಸಿಕೊಳ್ಳುವ ಅಸಂಬದ್ಧ ಸಂಗತಿಗಳು ಎರಡೇ ಎರಡು ಶೂರ್ಪಣಖಿಯ ಕಿವಿಮೂಗುಗಳನ್ನು ಕೊಯ್ಯುವುದಕ್ಕೆ ಆಜ್ಞೆ ನೀಡುವುದು ಮತ್ತು ವಾಲಿಯನ್ನು ಅನುಚಿತ ರೀತಿಯಿಂದ ಕೊಲ್ಲುವುದು ಆದರೆ ಈ ಎರಡು ತಪ್ಪುಗಳಿಂದ ರಾಮನ ವ್ಯಕ್ತಿತ್ವ ಮಸುಕಾಗುವುದಿಲ್ಲ ಇವು ರಾಮನ ಬಗ್ಗೆ ತುಳಸೀದಾಸರ ವಿಚಾರದಾರೆ

ಕುವೆಂಪು ಅವರ 'ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ರಾಮ ಅಪ್ರಾಕೃತನೂ ಹೌದು, ಮಾನವನೂ ಹೌದು ಅವನ ಮಾನವೀಯತೆಗೆ ಯಾವುದೇ ಚ್ಯುತಿ ಬರದಂತೆ ಅವನ ಅಪ್ರಾಕೃತ ವ್ಯಕ್ತಿತ್ವವನ್ನು ಭವ್ಯವಾಗಿಸಿದ್ದಾರೆ ಕವಿ ರಾಮ, ವಿಷ್ಣುವಿನ ಅವತಾರಗಳಲ್ಲೊಂದು ಎಂಬುದು ಒಂದು ನಂಬಿಕೆ ಆದರೆ ಕುವೆಂಪು ಅವರ ಕಲ್ಪನೆಯೇ ಬೇರೆ ಅವರು ಅವತಾರವೆನ್ನುವುದು ಜನಮನದ ಶಕ್ತಿ ಮತ್ತು ಅಭೀಪ್ಸೆಯನ್ನು ರಾಮನ ಅಸಾಮಾನ್ಯಗುಣ ಅವನ ಬಾಲ್ಯದಲ್ಲೇ ತಿಳಿಯುತ್ತದೆ ಆಗಸದ ಚಂದ್ರ ತನಗೆ ಬೇಕೆಂದು ಹಟ ಹಿಡಿದು ಅಳುವ ಮಗು ರಾಮ, ತನ್ನ ಅಮರ್ತ್ಯ ಪ್ರಜ್ಞೆಯನ್ನು ಮರೆಯುತ್ತಾನೆ ರಾಮನನ್ನು ವನವಾಸದಿಂದ ಹಿಂದಿರುಗಿಸಲು ಹೋದ ಭರತನಿಗೆ ವಸಿಷ್ಠ ಹೇಳುವ 'ರಾಮನಾತ್ಮದ ವಿರಾಟ್ ಪಕ್ಷವಿಸ್ತಾನೆಗೆ ಸಾಲದಲ್ಪಂ, ಅನಂತಾಕಾಶಯಾತ್ರಿ, ಕೇಳ್, ರಾಮನಿಚ್ಛಾ ವೈನತೇಯಂ ಎಂಬ ಮಾತುಗಳು ರಾಮನ ಬದುಕಿನ ಉದ್ದೇಶದ ಮೇಲೆ ಬೆಳಕು ಬೀರುತ್ತವೆ ರಾವಣ ವದೆಯ ನಂತರ, ಮಡಿದ ತಮ್ಮ ಸಂಬಂದಿಗಳ ಅಂತ್ಯಕ್ರಿಯೆಗಳಲ್ಲಿ ತೊಡಗಿದ್ದವರಿಗೆ ರಾಮ ಬೇರೆಬೇರೆಯಾಗಿ ಮೈದೋರುತ್ತಾನೆ ಅವನನ್ನು ಅಲ್ಲಿ ಕಂಡೆವು ಇಲ್ಲಿ ಕಂಡೆವು ಎಂದೆಲ್ಲ ಹೇಳುತ್ತಾರೆ ಆ ಮೂಲಕ ರಾಮನ ಸರ್ವಾಂತರ್ಯಾಮಿತ್ವಕ್ಕೆ ಸಾಕ್ಷಿಗಳಾಗುತ್ತಾರೆ

ಸೀತೆಯೊಡನೆ ರಾಮನೂ ಅಗ್ನಿಪ್ರವೇಶ ಮಾಡುವುದು ಕಾವ್ಯದ ಒಂದು ವಿಶಿಷ್ಟಪ್ರಸಂಗಗಳ ಪೈಕಿ ಒಂದು ಗಂಡು ಹೆಣ್ಣನ್ನು ಶಂಕಿಸುವಂತೆ ಹೆಣ್ಣೂ ಗಂಡನ್ನು ಶಂಕಿಸಬಹುದು ಇದು ಈ ಯುಗದ ಒಂದು ಬೆಳವಣಿಗೆ ರಾಮ ಇದಕ್ಕನುಸಾರವಾಗಿಯೇ ನಡೆದುಕೊಳ್ಳುತ್ತಾನೆ

ಒಂದು ದಿನ ಗಂಗೆಯಲ್ಲಿ ಸ್ನಾನಮಾಡುವಾಗ ದೃಶ್ಯಸೌಂದರ್ಯದಿಂದ ರಸಸಮಾದಿ ಹೊಂದಿದ್ದಕ್ಕಾಗಿ ರಾಮ ಪೂಜ್ಯನೆನ್ನುತ್ತಾರೆ ಕುವೆಂಪು ಸೀತೆ ಹದಿಬದೆಯರ ಅದಿದೇವಿ ರಾಮ ಸೀತೆಯರ ದಾಂಪತ್ಯ ಸಂಬಂದ ಅಸ್ವಾದ್ಯಶವಾದುದು ಸಂಸಾರ ಚಿತ್ರಗಳನ್ನು ಕುವೆಂಪು ಅಮೋಘವಾಗಿ ಚಿತ್ರಿಸಿದ್ದಾರೆ ಕಾವ್ಯದ ಕೆಲವು ಉಕ್ತಿಯನ್ನು ಪರಿಭಾವಿಸಬಹುದು

ಹದಿಬದೆಗೆ ತೋರ್ದಪುದು
ತನ್ನಿನಿಯನೊರ್ವನೊಳೆ
ಸರ್ವಮನುಜರ, ಮತ್ತೆ ಸರ್ವಲೋಕದ ಸರ್ವ
ವೈವಿಧ್ಯಮುಂ, ಪ್ರೇಮನಿಷ್ಠೆಯ ಪತಿಗುಮಂತೆ
ತನ್ನ ಸತಿಯೊಳೆ ತೋರ್ದಪುದು
ಸರ್ವಲಲನೆಯರ
ಸರ್ವಶೃಂಗಾರಮುಂ!

'ಪುರುಷೋತ್ತಮನ ಲೋಕಲೀಲಾದರ್ಶನ ವನ್ನು ಒಳಗೊಂಡಿರುವ ಮಹಾಕಾವ್ಯವಿದು *

# ಹನುಮದವತಾರ

---ಬೀಮಾಚಾರ್ಯ

ಶ್ರೀ ವಾಯುದೇವರ ಮೂರು (ಹನುಮ, ಭೀಮ, ಮಧ್ವ) ಅವತಾರಗಳಲ್ಲಿ ಹನುಮದವತಾರವು ಮೊದಲನೆಯದು 'ಪ್ರಥಮೋ ಹನುಮನ್ನಾಮ' ಅಂದಂತೆ ಹನುಮಾನ್ ಇತಿಖ್ಯಾತ ಅಗ್ರ್ಯ ಅವತಾರ ಎಂಬ ಮಾತುಗಳು ಇದನ್ನು ಸಮರ್ಥಿಸುತ್ತವೆ ಹನು ಶಬ್ದಕ್ಕೆ ವಿಶೇಷಜ್ಞಾನವೆಂದು ಅರ್ಥವಿರುವಾಗ ಹನುಮಂತನೆಂದರೆ ಪರಮಜ್ಞಾನಿಯು, ಜೀವೋತ್ತಮರಾಗಿರುವ, ಸಕಲ ಜಿ ವಿಗಳಲ್ಲಿರುವ ಮುಖ್ಯಪ್ರಾಣದೇವರು, ಉತ್ತಮ ಜ್ಞಾನಿಗಳಾದುದರಿಂದ ಹದಿನಾಲ್ಕು ಲೋಕಗಳಲ್ಲಿಯೂ ಜ್ಞಾನದ ಹಿರಿಮೆಯನ್ನು ಬಿತ್ತರಿಸಿದರು ಹನುಮಾನ್ ಶಬ್ದವು ಅವರಿಗೆ ಸಾರ್ಥಕವೂ ಅನ್ವರ್ಥಕವೂ ಆಗಿದೆ ಇಂತಹ ಸುಪ್ರಸಿದ್ಧವಾದ ಹೆಸರುಳ್ಳ ಹನುಮಂತ ದೇವರನ್ನು ಅತ್ಯಂತ ಭಕ್ತಿಯಿಂದ ಸ್ತೋತ್ರ ಮಾಡುವರು

ಬುದ್ಧಿರ್ಬಲಂ, ಯಶೋಧೈರ್ಯಂ,<br>
ನಿರ್ಭಯತ್ವಮರೊ ಗತಾ |<br>
ಅಜಾಡ್ಯಂ ವಾಕ್ಪಟುತ್ವಂ ಚ<br>
ಹನುಮತ್ಸ್ಮರಣಾದ್ಭವೇತ್ ||

ಶ್ರೀ ಹರಿ ವಾಯುಸ್ತುತಿಯಲ್ಲಿ ವರ್ಣಿಸಿದಂತೆ ಬುದ್ಧಿ ಮತ್ತು ಪರಾಕ್ರಮಗಳಲ್ಲಿ ಇವರನ್ನು ಸರಿಗಟ್ಟುವವರಾರೂ ಇಲ್ಲ ವಾಯುಸ್ತುತಿಯಲ್ಲಿ ಒಂದ ಅನೇಕ ವರ್ಣನೆಗಳು ಇವರ ಬಲ ಮತ್ತು ಬುದ್ಧಿಗಳ ಮೇಲ್ಮೆಯನ್ನು ಪ್ರಕಟಿಸುವವು.

ಮಹಿತ ಮಹಾಪೌರುಷ ಎಂಬ ವಿಶೇಷಣದಲ್ಲಿ ಹನುಮಂತದೇವರ ಪರಾಕ್ರಮದ ಒಗ್ಗ ವರ್ಣನೆ ಇದೆ ಇವರ ಶೌರ್ಯವು ತಿಳಿ ಕಹಿತ ಕಾರ್ಯಕ್ಕಾಗಿ ಮೀಸಲಾಗಿದ ಸಜ್ಜನರ ಪೋಗಃ ಕೆಗೆ ಪಾತ್ರವಾಗಿದ ಮಹ್ಪಜಿ ವಿಗಳನ್ನು ಸದಬಡೆದಿದೆ ಶ್ರೀ ರಾಮದೇವರ ನಂಬಿಗೆಯ ಸೇವಕನಾಗಿ ವೀರಹನುಮಂತನು ಮಾಡಿದ ಕಾರ್ಯಗಳು ಅದ್ಭುತವಾಗಿವೆ ಆಕಾಶಮಾರ್ಗದಿಂದ ಸಮುದ್ರವನ್ನು ದಾಟುವಾಗ ಕುಸೆ ನಯಲ್ಲಿ ಮುಂದಿನಾಗಿ ಅನೇಕ ಆಪತ್ತುಗಳನ್ನು ಎದುರಿಸಬೇಕಾಯಿತು ಸೀತಾಸಂಶೋಧನೆ ಯಂತಹ ಮಹಾಕಾರ್ಯಕ್ಕೆ ಅಡೆಯಾಗುವಂತೆ ಇತರ ಕೆಲಸಗಳನ್ನು ಪರಿದಂಬಿಸದೆ ಕಾಯಿತು ಅಭಿಯವಾನನಿ ದದೆ ಕಾಯಿತು ವಾರಿಯಲ್ಲಿ ಅಡ್ಡಗಟ್ಟಿದ ಮೈನಾಕ ಪರ್ವತದಲ್ಲಿ ಕೆಲಕಾಲ ವಿಶ್ರಮಿಸಿ ಮುಂದೆಸಾಗಿದರು ದೇವತೆಗಳ ಹೇಳಿಕೆಯಂತೆ ಸರಸೆ ಯಂಬ ನಾಗಮಾತೆಯ ಬಾಯಿಯಲ್ಲಿ ಸೂಕ್ಷ್ಮಜಂತುವಾಗಿ ಪ್ರವೇಶಿಸಿ, ಅವಳನ್ನು ಕೊಲ್ಲದ ಅದ ಮಾರ್ಗದಿಂದ ಹೊರಗೆ ಬಂದು ಆಕಾಶಯಾತ್ರೆ ಮಾಡಿದರು ಬ್ರಹ್ಮನಿಂದ ವರಪಡೆದು, ಪ್ರಾಣಿಗಳ ನೆರಳಿನಿಂದ ಅವರನ್ನು ಸೆಳೆಯುತ್ತಿರುವ ಸಿಂಹಿಕೆ ಯೆಂಬ ರಾಕ್ಷಸಿಯು ನುಂಗಿದಾಗ, ಅವಳ ಹೊಟ್ಟೆಯನ್ನು ಹರಿದು ಮುಂದಕ್ಕೆ ಪ್ರಯಾಣ ಬೆಳೆಸಿದನು ಅಯೊ ಗ್ಯರಿಗ ಅದೊ ಗತಿಯಿ ತಪ್ಪದ್ದಿಲ್ಲ ಎಂದು ತೊ ರಿಸಿಕೊಟ್ಟನು ಇವನ ಪರಾಕ್ರಮವನ್ನರಿಯದ ಲಂಕಾದ ವತೆಯು ಪುರಪ್ರವೇಶಕ್ಕೆ ಅಡ್ಡಿಮಾಡಿದಳು ತನ್ನ ನಿಜರೂಪತೋರಿಸಿ, ಅವಳನ್ನು ಮೂರಸರಿಸಿ ಲಂಕಾಪಟ್ಟಣವನ್ನು ಪ್ರವೇಶಿಸಿದನು ಸರ್ವಜ್ಞರಾದ ಇವರಿಗೆ ಸೀತಾದೇವಿಯನ್ನು ಹುಡುಕುವುದು ಸುಲಭವಾಗಿತ್ತು ಆದರೂ ತೃಣಪ್ರಾಯರಾದ ರಾಕ್ಷಸರನ್ನು ಕಂಡು ಹೆದರಿಸಿದರು ಲಂಕಾಪಟ್ಟಣದ ರಾಜವೈಭವವನ್ನು ಕಂಡು ಇದನ್ನು ಯಾವಾಗ ನಾಶಮಾಡುವೆನೋ ಎಂಬ ಆತುರತೆಯಿಂದ ಅತ್ತಿಂದಿತ್ತ ಹಾರಾಡಹತ್ತಿದರು ಪರಾಕ್ರಮಕ್ಕೆ ಪ್ರತಿ ಕವಾದ ಉಗ್ರರೂಪವನ್ನು ತೋರಿದರು ಅಶೋಕವನಕ್ಕೆ ಬಂದಾಗ ಒಂದು ಗಿಡದಡಿಯಲ್ಲಿ ಮುಖಿತಳಾಗಿ ಕುಳಿತ ಸೀತಾಮಾತೆಯನ್ನು ಕಂಡರು ಅವಳ ಮುಖವನ್ನು ನೊಡಲಾರದೆ, ಅವಳಿಗ ರಾಮ ಮುದ್ರಿಕೆಯನ್ನಿತ್ತು ತನ್ನ ಪರಿಚಯ ಹೇಳಿಕೊಂಡರು ಅವಳಿಂದ ಅಪ್ಪಣೆ ಪಡೆದು ಇಚ್ಛಾ



ಮಾತ್ರದಿಂದ ಈ ಲಂಕಾಪಟ್ಟಣವನ್ನು ನಾಶಮಾಡಬಲ್ಲೆ ಎಂದು ಪ್ರತಿಜ್ಞೆಗೈದು ಲಂಕಾದಹನ ಮಾಡಿದರು ಮರಳಿ ರಾಮನ ಹತ್ತಿರ ಬಂದಾಗ ಸೀದಾಸಂದರ್ಶನ ಹಾಗೂ ಲಂಕಾದಹನದ ವಿಚಾರಗಳನ್ನೂ ಹೇಳಿ, ಅವರಿಂದ ಗೌರವ ಪಡೆದವರು ಬಾಹುಶಾಲಿ ಎಂಬುದು ಪರಾಕ್ರಮಿಗೆ ಇರುವ ಇನ್ನೊಂದು ವಿಶೇಷಣ ಅವನ ಪರಾಕ್ರಮವು (ಬಾಹುಗಳು) ಸ್ವಸಂರಕ್ಷಣೆಗಾಗಲಿ, ಇನ್ನೊಬ್ಬರ ಹಿತಕ್ಕಾಗಲಿ ಉಪಯೋಗವಾಗದೇಕು ಸಾಮರ್ಥ್ಯವಿಲ್ಲದವನು ಶತ್ರು ನಿಗ್ರಹಮಾಡಲಾರನು ಹನುಮಂತದೇವರು ಲಂಕಾಪಟ್ಟಣಕ್ಕೆ ಹೋದಾಗ ನಿರಾಯುಧರಾಗಿದ್ದರೂ ತಮ್ಮ ಬಾಹುಸಾಮರ್ಥ್ಯದಿಂದ ಶತ್ರುಸಂಹಾರಮಾಡಿದರು ಅಶೋಕವನದಲ್ಲಿಯ ಮರಗಳನ್ನು ಮುರಿದರು ಹೀಗೆ ಆಯುದಗಳ ಸಹಾಯವಿಲ್ಲದೆ ಕೇವಲ ಬಾಹುಬಲದಿಂದ ಶತ್ರುಗಳನ್ನು ಸದೆಬಡಿದ ಶಕ್ತಿ ಹನುಮಂತದೇವರಿಗೆ ಇದ್ದಿತು ಇದರಂತೆ ತನ್ನ ಭಕ್ತರಿಗೆ ರಕ್ಷಣೆ ಮಾಡುವ ಶಕ್ತಿಯೂ ಕೂಡ ಇವರಲ್ಲಿದೆ

ಬ್ರಹ್ಮಚರ್ಯಾದಿದರ್ಮಗಳಿಂದ ಕೂಡಿದವರು ಹನುಮಂತ ಪ್ರದಮಾವತಾರದಲ್ಲಿ ಬ್ರಹ್ಮಚರ್ಯ ಆಶ್ರಮವನ್ನು ಪಾಲಿಸಿ, ಅಖಂಡಬ್ರಹ್ಮಚಾರಿ ಎನಿಸಿಕೊಂಡರು ಜಿತೇಂದ್ರಿಯರಾಗಿ ಇಂದ್ರಿಯಗಳನ್ನು ವರಪಡಿಸಿಕೊಂಡರು ಅನಂತವೇದಗಳನ್ನೂ, ಸಕಲ ಶಾಸ್ತ್ರಗಳನ್ನೂ ಮೂಲರಾಮಾಯಣವನ್ನು ಸೂರ್ಯಾಂತರ್ಯಾಮಿಯಾದ ನಾರಾಯಣದಲ್ಲಿ ಅದ್ಯಯನಮಾಡಿದರು ಬ್ರಹ್ಮಚರ್ಯ ಆಶ್ರಮ ಸಕಲ ದರ್ಮಗಳ ಅನುಷ್ಠಾನಮಾಡಿ, ನೈಷ್ಠಿಕ ಬ್ರಹ್ಮಚಾರಿಗಳಲ್ಲಿ ಒಬ್ಬರಾದರು ! ಕಾಡಿನಲ್ಲಿ ತಪಸ್ಸು ಮಾಡಿ, ವಾನಪ್ರಸ್ಥರಂತಿದ್ದರೂ, ಶ್ರೀಹರಿಯನ್ನು ನಿರಂತರವಾಗಿ ದ್ಯಾನಮಾಡುವ ಸನ್ಯಾಸಿಯಂತಿದ್ದರೂ, ಇವೆರಡೂ ಆಶ್ರಮದರ್ಮಗಳನ್ನು ಬ್ರಹ್ಮಚರ್ಯದೊಡನೆ ಸಮನ್ವಯಿಗೊಳಿಸಿ, ಆಶ್ರಮಗಳಿಗೆ ಯೋಗ್ಯವಾದ ದರ್ಮಗಳಿಂದ ಯುಕ್ತರಾದವರೇ ಹನುಮಂತದೇವರು

ಭಕ್ತರ ಪಾಪಗಳನ್ನು ಪ್ರತಿದಿನದಲ್ಲಿಯೂ ಹರಿಭಕ್ತಿಯೆಂಬ ದೆಂಕಿಯಿಂದ ಸುಟ್ಟು ನಾಶಮಾಡುವ ಅವತಾರವೇ ಹನುಮಂತದೇವರದು ಪರ್ವತಾಕಾರದ ಕಷ್ಟಗಳು ಬಂದರೂ ಅದನ್ನು ಸಹಿಸಿ ನಿಶ್ಚಲವಾದ ಮನಸ್ಸುಳ್ಳವರು ಮೊದಲನೆಯ ಅವತಾರದ ಹನುಮಂತದೇವರು ನಿರಾಯುದರಾಗಿ, ಏಕಾಕಿಯಾಗಿ ಲಂಕಾಪಟ್ಟಣಕ್ಕೆ ಹೊರಟಾಗ ರಾಮದ್ಯಾನದಲ್ಲಿ ನಿರತರಾದರು ಬಾಲಕ್ಕೆ ದೆಂಕಿಹಾಕಿದಾಗಲೂ ಲಂಕ ಊರು ಸುಟ್ಟರೂ ಅಪಾರ ಸಹನೆಯನ್ನು ತೋರಿದರು ಅಪಾರಸಹನಶಕ್ತಿ, ಉತ್ತಮ ಬಲವನ್ನು ವ್ಯಕ್ತಪಡಿಸಿದ ಈ ಅವತಾರದಲ್ಲಿ ಸಹಸ್ವಾನ್ ಅಂದರೆ ಸಹನ ಶಕ್ತಿ ಮತ್ತು ಬಲವುಳ್ಳವರರಲ್ಲಿ ಅಗ್ರಗಣ್ಯರೆಂದು ಅನ್ವರ್ದಕನಾಮ ಬಂದಿತು

ಮೊದಲನೆಯ ಅವತಾರವಾಗಿರುವ ಹನುಮಂತದೇವರಲ್ಲಿ ಕಲಿಯ ಆವೇಶವಿಲ್ಲ ಆದ್ದರಿಂದ ಯಾವಾಗಲೂ ಪಾಪಕೆಲಸಗಳನ್ನು ಮಾಡಿದವರಲ್ಲ ಇವರಲ್ಲಿ ವಿಪರೀತಜ್ಞಾನವಂತೂ ಇಲ್ಲವೇ ಇಲ್ಲ ರಾವಣನು ವಿಭೀಷಣನ ಮೇಲೆ ಕೋಪಿಸಿದಾಗ, ಅವನು ರಾಮನಿಗೆ ಶರಣುಬಂದನು ಶತ್ರುವಿನ ಬಂದುವಾದವನನ್ನು ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಬಾರದು ಎಂದು ಎಲ್ಲರೂ ಹೇಳಿದರು ಹನುಮಂತದೇವರು, ಈ ತಪ್ಪುತಿಳುವಳಿಕೆಯನ್ನು ಪರಿಹರಿಸಿ ವಿಭೀಷಣನಿಂದ ತಮಗೆ ಯಾವ ಆಪತ್ತೂ ಬರುವುದಿಲ್ಲವೆಂದು ಆತನು ಶುದ್ಧ ಮನಸ್ಸಿನವನೆಂದು ಪ್ರತಿಪಾದಿಸಿದರು ಅದರಿಂದಲೇ ಹನುಮಂತದೇವರು ವಿಪರೀತಜ್ಞಾನವನ್ನು ಕಳೆದು, ಯೋಗ್ಯ ಜೀವರ ಸಕಲ ಪಾಪಗಳನ್ನು ಸಂಪೂರ್ಣವಾಗಿ ಪರಿಹರಿಸುವರು ಎಂಬ ಬಿರುದು ಯೋಗ್ಯವಾಗಿದೆ

ರಾಮಭಕ್ತನಿಗೆ ಅಸಾದ್ಯವಾದ ಕಾರ್ಯವೂ ಯಾವುದೂ ಇಲ್ಲ ಎಂದು ತೋರಿಸಿಕೊಟ್ಟರು, ಸಕಲ ತತ್ವಗಳಿಗೂ, ಜೀವಿಗಳಿಗೂ ಪ್ರೇರಕರಾಗಿರುವ, ಅಂತರ್ಗತರಾದ ಹನುಮಂತದೇವರು ಶರೀರದಲ್ಲಿ ನಡೆಯದೇಕಾದ ಎಲ್ಲ ಕಾರ್ಯಗಳನ್ನು ಮಾಡಿಸುತ್ತಿರುವರು ಅವರು ಸರ್ವಜೀವನಿಯಾಮಕರು, ಅದರಿಂದಲೇ ಅದಿಕ ಪ್ರಾಣರು ಸಾದಾರಣಜೀವಿಗಳಿಗೂ ನಂಬಿಕೆ ಹುಟ್ಟುವಂತೆ ಹನುಮದವತಾರ ಕಾಲದಲ್ಲಿ ಮಹತ್ಕಾರ್ಯಮಾಡಿರುವರು

ಬ್ರಹ್ಮಹಾಗೂ ರುದ್ರದೇವರ ವರದಿಂದ ಅವದ್ಯನಾದ ಇಂದ್ರಜಿತುವು ಯುದ್ಧದಲ್ಲಿ ನಾಗಪಾಶಬಲದಿಂದ ಕಪಿಗಳನ್ನು ಬಂದನಮಾಡಿದನು ಹನುಮಂತ ಮಾತ್ರ ಸ್ವಶಕ್ತಿಯಿಂದ ವಶವಾಗಲಿಲ್ಲ ಎರಡನೆಯ ಯುದ್ಧದಲ್ಲಿ ಕಪಿಗಳೊಡನೆ ಲಕ್ಷ್ಮಣನೂ ಪಾಶಬದ್ಧನಾದನು ವಿಭೀಷಣ ಜಾಂಬವಂತರ ಸಲಹೆಯಂತೆ ದಿವ್ಯೌಷದಿಗಳಿಂದ ಕೂಡಿದ ಗಂದಮಾದನ ಪರ್ವತವನ್ನು ಎತ್ತಿ ತಂದರು ಗಾಯಗೊಂಡ ಕಪಿಗಳು ಹಾಗೂ ಲಕ್ಷ್ಮಣಾದಿಗಳು ಮೃತಸಂಜೀವನಿ ಮೂಲಿಕೆಗಳಿಂದ ಸಚೇತನರಾದರು ಐದು ಸಾವಿರ ಯೋಜನ ದೂರದಲ್ಲಿರುವ ಮೇರುಪರ್ವತದ ಪಕ್ಕದಲ್ಲಿದ್ದ ಅಸಂಖ್ಯ ಮೂಲಿಕೆಗಳಿಂದ ಕೂಡಿದ ಉತ್ತರ ದಿಶೆಯಲ್ಲಿರುವ ಗಂದಮಾದನ ಪರ್ವತವನ್ನು ಬಲಶಾಲಿಯಾದ ಹನುಮಂತನು ಹೊತ್ತು ತಂದನು ಇವನ ನೆರವಿನಿಂದ ಕಪಿಸೈನ್ಯವೂ ಹಾಗೂ ಲಕ್ಷ್ಮಣನೂ ಬದುಕಿದರು ಹನುಮಂತನ ಪರಾಕ್ರಮವು ಪರೋಪಕಾರಕ್ಕಾಗಿ ವಿನಿಯೋಗವಾಗಿದ್ದನ್ನು ಇಲ್ಲಿ ಲಕ್ಷಿಸಬೇಕು ಗಂದಮಾದನ ಪರ್ವತವು ಚಿಕ್ಕದಲ್ಲ "ಶತಂಯೋಜನಂ ಉಚ್ಚನ್ತಾವತ್ ವಿಸ್ತಾರವಾನ್' 1200 ಮೈಲು ಎತ್ತರ ಮತ್ತು ಅಗಲವಾದದ್ದು, ಅದರಂತೆ ವಿಪರೀತವಾದ ಭಾರವೂ ಇದ್ದಿರಬೇಕು ಈ ಪರ್ವತವನ್ನೂ ಅಂಗೈಯಲ್ಲಿ ಹಿಡಿಯಬೇಕಾದರೆ ಆತನ ಕೈಯೂ, ಅದರಂತೆ ಇತರ ಶರೀರವೂ ಸಾವಿರ ಯೋಜನಗಳಿಗಿಂತ ಅದಿಕ ಎತ್ತರ, ವಿಸ್ತಾರದ್ದಿರಬೇಕು ಈ ಪರ್ವತವನ್ನೆತ್ತಿದಾಗ ಒಂದು ಚಿಕ್ಕಕಲ್ಲಾಗಲಿ, ಗಿಡವಾಗಲಿ ಕೆಳಗೆ ಬೀಳದಿರಬೇಕಾದರೆ, ಅವನ ಚಾತುರ್ಯವು ಅಸದೃಶವಾದದ್ದು ಚಿಕ್ಕ ಹುಡುಗರು ಆಟದಲ್ಲಿ ಗೋಲಿಗುಂಡನ್ನು ಎಸೆಯುವಂತೆ ಹನುಮಂತದೇವರು ಗಂದಮಾದನ ಪರ್ವತವನ್ನೂ ಸ್ವಸ್ಥಾನದಲ್ಲಿ ಮರಳಿಬಿಸಾಡಿದರು ಗಂಧಮಾದನ ಪರ್ವತವನ್ನೆತ್ತಿದಾಗ ಒಂದು ಕಲ್ಲೂ ಬೀಳಲಿಲ್ಲ, ಒಂದು ಪ್ರಾಣಿಯೂ ಸಾಯಲಿಲ್ಲ ಯಾರಿಗೂ ಗೊತ್ತಾಗದಂತೆ ಮಾಡಿದ ಈ ಕಾರ್ಯವು ಚಾತುರ್ಯದ ದ್ಯೋತಕವಾಗಿದೆ

ಹನುಮಂತದೇವರ ಮುಷ್ಟಿಯ ಪ್ರಬಾವವನ್ನು ನೋಡಬೇಕು ಲಕ್ಷ್ಮಣನನ್ನು ಸೆರೆಹಿಡಿಯಲು ಪ್ರಯತ್ನಿಸಿದ ರಾವಣನ ಎದೆಯ ಮೇಲೆ ಅವರು ಗುದ್ದಿದರು ಆಗ ಅವನ ಕಣ್ಣು, ಮೂಗುಬಾಯಿಗಳಿಂದ ರಕ್ತಪ್ರವಾಹ ಬಂದಿತು ಹನುಮಂತದೇವನ ಮೆಲ್ಲನೆ ಗುದ್ದಿದ ಪರಿಣಾಮವಿದು ಅವನ ಬಲಗೈಯಲ್ಲಿ ದರಿಸಿದ ಬಂಗಾರದ ಬಳೆಯ ಪ್ರಕಾಶದಿಂದ ರಾಕ್ಷಸರ ಕಣ್ಣುಗಳು ಕುಟ್ಟಿದವು. ಯುದ್ಧವನ್ನು ಮರೆತು ನಿಂತುಬಿಟ್ಟರು ವಜ್ರಕವಚ, ಧರಿಸಿದ ರಾವಣನ ಎದೆಯಮೇಲೆ ಬಲವಾದ ಗುದ್ದು ಬಿದ್ದಾಗ ಅವನು ಅಸಹಾಯದಾದನು ಮೇರುಪರ್ವತದಂತೆ ಶೋಭಿಸುತ್ತಿದ್ದ ರಾವಣನ ಎದೆಯಲ್ಲಿ ರಕ್ತಸರೋವರವು ಏರ್ಪಟ್ಟಂತಾಯಿತು ಇಂತಹ ಮುಷ್ಟಿಯು ಸಕಲ ಸಜ್ಜನರ ಇಷ್ಟಾರ್ದಗಳನ್ನು ಪೂರೈಸಲಿ

ಮೋಕ್ಷವನ್ನು ಕೊಡುವ ಶಕ್ತಿಯು ಶ್ರೀಹರಿಗೆ ಮಾತ್ರ ಇರುವುದು ಆದ್ದರಿಂದ ಆತನಿಗೆ ಮುಕುಂದನೆಂದು ಹೆಸರು ಪ್ರಸಿದ್ಧವಾಗಿದೆ ಶ್ರೀಹರಿಯಿ ರಾಮಾವತಾರಕಾಲದಲ್ಲಿ ಮುಕ್ತಿಪ್ರದವಾದ ಅನೇಕ ಸೇವೆಯನ್ನು ಹನುಮಂತ ಮಾಡಿರುವನು ಸರ್ವವ್ಯಾಪ್ತಯಾದ ಶ್ರೀರಾಮನಿಗೆ, ಸೀತಾದೇವಿ (ಅವಿ

ಯೋಗಿನಿಯಾವ ಲಕ್ಷ್ಮಿ) ಯು ವಿಯೋಗವಾದ್ದು ಕೇವಲ ನಟನೆಯು ವಿಷಯುವಾದರೂ ಹನುಮಂತನು ರಾಮವಚನವನ್ನು ಪಾಲಿಸಿ ಕಪಿಸಮೂಹದೊಡನೆ ಲಂಕಾಪಟ್ಟಣಕ್ಕೆ ಹೋದದ್ದು ಅಲ್ಲಿ ಸೀತಾದೇವಿಗೆ ಉಂಗುರಕೊಟ್ಟು ತನ್ನ ಪರಿಚಯ ಹೇಳಿದ್ದು, ಅವಳಿಂದ ಚೂಡಾಮಣಿ ಪಡೆದದ್ದು ಸೀತಾಸಂದೇಶತಂದದ್ದು, ರಾಮನಲ್ಲಿ ತೋರಿದ ಅಪಾರ ಭಕ್ತಿಯ ಹಾಗೂ ಸ್ವಾಮಿನಿಷ್ಠೆಯ ದೃಷ್ಟಾಂತಗಳು ಇತರರಿಂದ ಅಸಾಧ್ಯವಾದ ಕಾರ್ಯಗಳನ್ನು ಸಕಲಸಜ್ಜನರು, ಹಾಗೂ ಶ್ರೀಹರಿ, ಲಕ್ಷ್ಮೀದೇವಿಯರು ಅರಿಯುವಂತೆ ಮಾಡಿದ್ದು ಉತ್ತಮಸೇವೆಯಾಯಿತು ಹರಿದ್ವೇಷಿಗಳಾದ ರಾಕ್ಷಸರನ್ನು ಕೊಲ್ಲುವುದು ಮಾಹಾ ಪುಣ್ಯಕಾರ್ಯವೆಂದು ಹನುಮಂತ ತಿಳಿದೆ ರಾಕ್ಷಸರವದೆಮಾಡಿದ ಹೀಗೆ ಅನಂತಪುಣ್ಯಕಾರ್ಯಗಳನ್ನು ಮಾಡಿದ್ದರಿಂದ ಶ್ರೀರಾಮದೇವರ ಹೃದಯದಲ್ಲಿ ಹನುಮಂತನ ಬಗ್ಗೆ ನಿರ್ಮಲವಾದ ಅಂತ ಕರಣ ಉಕ್ಕಿಬಂದಿತು ಪ್ರೀತಿಯು ಹೆಚ್ಚಿದಂತೆ ಅವನ ಕಣ್ಣುಗಳೆರಡೂ ಅರಳಿದವು. ಅಂತಹ ಕಣ್ಣುಗಳಿಂದಲೇ ಭಕ್ತರಮೇಲೆ ದಯಾರ್ದ್ರ ದೃಷ್ಟಿ ಬೀರುವನು ಶ್ರೀಹರಿಯ ಅಂಗೈಗೆ ಸಮಾನವಾದ ಅಂಗೈ (ತೆರೆದಹಸ್ತ ಅನುಗ್ರಹದ ಹಸ್ತ) ಇನ್ನೊಂದಿಲ್ಲ ಇವರು ಎಲ್ಲಿ ಕೈಯಿಡುವರೋ ಅದು ಅವರ ಅನುಗ್ರಹಕ್ಕೆ ಪಾತ್ರವಾದಂತೆ ಈ ಅನುಗ್ರಹವು ಋಜುಗಣಸ್ತರನ್ನು ಬಿಟ್ಟು ಯಾರಿಗೂ ಸಿಕ್ಕಿದ್ದಲ್ಲ "ಇಂತಹ ಅನುಗ್ರಹ ಪಡೆದ ಹನುಮಂತನೇ ಧನ್ಯನು" ಎಂದು ದೇವತೆಗಳು ಸ್ತೋತ್ರಮಾಡಿದರು

'ಪರಮೇಷ್ಠಿ ಎಂಬ ಬ್ರಹ್ಮದೇವರು ಆಳುತ್ತಿರುವ ಲೋಕವು ಸತ್ಯಲೋಕ ಈ ಪಾರಮೇಷ್ಠಲೋಕದ ಅದಿಪತ್ಯವು ಹನುಮಂತದೇವರಿಗೆ ಬರುವುದು ಇದು ದುಷ್ಪ್ರಾಪ ಅಂದರೆ ಎಲ್ಲರಿಂದಲೂ ಪಡೆಯಲು ಅಶಕ್ಯವಾದುದು ಎಂದು ಹೇಳುತ್ತಾರೆ ಈ ಸತ್ಯಲೋಕದ ಆದಿಪತ್ಯವು ಋಜುಗಣಸ್ಥರಾದ ಜೀವಿಗಳಿಗೆ ಮಾತ್ರದೊರೆಯುವುದು 99 ಕಲ್ಪಗಳ ಸಾದನೆ ಮಾಡಿರುವ ಹನುಮಂತದೇವರಿಗೆ ಶ್ರೀರಾಮದೇವರು ಉತ್ತಮಸೇವೆ, ಭಕ್ತಿಗಳಿಗೆ ಮೆಚ್ಚಿ ಈ ಪದವಿಯನ್ನು ದಯಪಾಲಿಸುವರು, ಅಸಂಖ್ಯ ಸೇವೆಗಳಿಂದ ತೃಪ್ತನಾದ ರಾಮದೇವರು ಮುಂದಿನಕಲ್ಪದಲ್ಲಿ ಬ್ರಹ್ಮಪದವಿಯನ್ನು ಕೊಟ್ಟು ಸಹಭೋಗವನ್ನೂ ಅನುಗ್ರಹಿಸುವರು

ಜ್ಞಾನೇ, ವಿರಾಗೇ, ಹರಿಭಕ್ತಿಬಾವೇ
ದೃತಿ, ಸ್ಥಿತಿ, ಪ್ರಾಣಬಲೇಷು ಯೋಗೇ
ಬುದ್ಧೌಚನಾನ್ಯೋ ಹನುಮತ್ಸಮಾನ
ಪುಮಾನ್ಕದಾಚಿತ್ ಕ್ವಚಿತ್ ಕಶ್ಚನೈವ ||

---

# ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ ಓ ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫ ಸರ್ (ರಿಸೆಪ್ಷನ್) ತಿ ತಿ ದೇ ತಿರುಪತಿ ಅದವಾ ಎಕ್ಸಿಕ್ಯೂಟಿವ್ ಆಫಸರ್ ತಿ ತಿ ದೇ ತಿರುಪತಿ ಇವರ ಹೆಸರಿನಲ್ಲಿ ಡಿ ಡಿ ಯನ್ನು ಕಳುಹಿಸದ ಕು ಡಿ ಡಿ ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೆ ಕು

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ ತಿ ದೆ ತಿರುಪತಿ

---

ಜ್ಞಾನದಲ್ಲಿಯೂ ವೈರಾಗ್ಯದಲ್ಲಿ, ಶ್ರೀಹರಿಯ ಭಕ್ತಿ ಭಾವದಲ್ಲಿಯೂ ಧೈರ್ಯ, ಸ್ಥೈರ್ಯ, ಪ್ರಾಣಗಳ ಸಾಮರ್ಥ್ಯದಲ್ಲಿಯೂ, ಯೋಗದಲ್ಲಿಯೂ ಬುದ್ಧಿಯಲ್ಲಿಯೂ, ಹನುಮಂತನಿಗೆ ಸರಿಗಟ್ಟುವ ಪುರುಷನು ಇನ್ನೊಬ್ಬನಿಲ್ಲ ಹನುಮಂದನಂದವರು ಎಂದಿಗೂ, ಯಾವ ಸ್ಥಳದಲ್ಲಿಯೂ ಆಗಿಲ್ಲ, ಆಗುವಂತಿಲ್ಲ ಇಂತಹ ಹನುಮಂತನುಯಾರು? ಎಂದಾಗ

ಹನುಮಾನಂಜನೀಸೂನು
ವಾಯುಪುತ್ರೋ ಮಹಾಬಲ
ರಾಮೇಷ್ಟ ಫಲ್ಗುನ ಸಖ
ಪಿಂಗಾಕ್ಷೋ ಮಿತವಿಕ್ರಮ

ವಾಯುದೇವರಿಂದ ಅಂಜನಾದೇವಿಯಲ್ಲಿ ಅವತಾರ ತಾಳಿದವರು ಹನುಮಂತದೇವರು ಅಂತೆಯೇ ಇವರು ವಾಯುಪುತ್ರರು, ಆಂಜನೇಯರು ಎಂದು ಪ್ರಸಿದ್ಧರಾಗಿರುವರು ಇವರು ಮಹಾಬಲಶಾಲಿಗಳು, ಶ್ರೀರಾಮನ ಪ್ರೀತಿಗೆ ಪಾತ್ರರಾದವರು, ಸೂರ್ಯನಂತೆ ತೇಜ ಪುಂಜನಾದ ಕಣ್ಣುಗಳುಳ್ಳವರು, ಅಪಾರವಾದ ಸಾಮರ್ಥ್ಯವುಳ್ಳವರು ಶ್ರೀರಾಮ ಸೇವೆಯ ನಿಮಿತ್ತವಾಗಿ ಮಾಡಿದ ಮಹತ್ಕಾರ್ಯಗಳವರ್ಣನೆ ಇಲ್ಲಿ ಬಂದಿದೆ

ಉದದಿಕ್ರಮಣಶ್ಚೈವ
ಸೀತಾಸಂದೇಶಕಾರಕ
ಲಕ್ಷ್ಮಣ ಪ್ರಾಣದಾತಾಚ
ದಶಗ್ರೀವಸ್ಯ ದರ್ಪಹಾ

ಹನುಮಂತ ದೇವರು ಬಾಹುಯುದ್ಧದಿಂದ ಶತ್ರುಗಳನ್ನು ನಿಗ್ರಹಿಸಿದರು

ಜ್ಞಾನ, ಭಕ್ತಿ ವೈರಾಗ್ಯಗಳಲ್ಲಿ ಅಗ್ರಗಣ್ಯರಾದ ಹನುಮಂತದೆ ವರು ಶ್ರೀರಾಮದೇವರಲ್ಲಿ ವಿಶೇಷ ಭಕ್ತಿಯನ್ನು ತೋರಿ, 'ದಾಸೋಹಂ'ನೆಂದು ಹೇಳಿ ಭಕ್ತರಲ್ಲಿ ಪರಮ ಆದರ್ಶರಾಗಿ ಕೀರ್ತಿಗಳಿಸಿದರು ಪ್ರಭುವಿನ ಆನಂದವನ್ನು ಪಾಲಿಸಿ, ಸದ್ಭಾವನೆಯಿಂದ ಪ್ರಾಮಾಣಿಕವಾಗಿ ಪರಮಪ್ರೇಮದಿಂದ ತನು, ಮನಗಳಿಂದ ಸಾಂಗೋಪಾಂಗಸೇವೆ ಮಾಡಿದ, ಹಾಗೂ ತನ್ನಸೇವೆಯ ಫಲವನ್ನು ಶ್ರೀರಾಮದೇವರಿಗೆ ಸಮರ್ಪಿಸಿದನ್ಸರಾದರು ನಾವು ಯಾವುದೇ ಕಾರ್ಯ ಕೈಕೊಂಡರೂ ಅದರ ಉದ್ದೇಶ ಒಳ್ಳೆಯವಾಗಿರಬೇಕು, ಪ್ರಾಮಾಣಿಕವಾಗಿರಬೇಕು ಶ್ರದ್ಧಾಪೂರ್ವಕವಾಗಿರಬೇಕು ಪ್ರಭುವಿಗೆ ಸಮರ್ಪಣಮಾಡುವ ಭಾವನೆಯಿಂದ ಕೂಡಿರಬೇಕು ಇದೇ ನಿಜವಾದ ಭಗವದ್ಭಕ್ತಿಯ ಲಕ್ಷಣವು ಇಂತಹ ಭಗವದ್ಭಕ್ತಿಯನ್ನು ದಯಪಾಲಿಸಿ ಪ್ರಭುರಾಮಚಂದ್ರದೇವರು, ಹನುಮಂತನನ್ನು ಆದರ್ಶಸೇವಕ, ಭಕ್ತನೆಂದು ಅನುಗ್ರಹಿಸಿದರು

ಅತುಲ ಬಲದಾಮಂ ಹೇಮಶೈಲಾಭದೇಹಂ
ದನುಜವನಕೃಶಾನುಂ, ಜ್ಞಾನಿನಾಮಗ್ರಗಣ್ಯಂ
ಸಕಲಗುಣನಿದಾನಂ ವಾನರಾಣಾಮಧೀಶಂ
ರಘುಪತಿ ಪ್ರಿಯಭಕ್ತಂ ವಾತಜಾತಂ ನಮಾಮಿ

ಮುಖ್ಯಪ್ರಾಣರಾದ, ಹನುಮಂತದೇವರಿಗೆ ಸಾಷ್ಟಾಂಗಪ್ರಣಾಮಗಳು





ಹಸಿರಿದ್ದರೆ ಉಸಿರು
ಹಸಿರಿದ್ದರೆ ಉಣಿಸು
ಹಸಿರಿದ್ದರೆ ನೀರು

**ವೃಕ್ಷೋ ರಕ್ಷತಿ ರಕ್ಷಿತಃ**

ಗಿಡಗಳನ್ನು ಕಾಪಾಡಿರಿ
ಮಾನವ ಪರಿಸರವನ್ನು
ಕಾಪಾಡಿದಂತಾಗುತ್ತದೆ

# ವಾರ್ತಾಲಹರಿ

## ರಾಮಾನುಜರ ಜಯಂತಿ

ವಿಶಿಷ್ಟಾದ್ವೈತದ ಪ್ರತಿಷ್ಠಾಪನಾಚಾರ್ಯ ಶ್ರೀ ರಾಮಾನುಜರ 975 ನೇ ವರ್ಷ ತಿರುನಕ್ಷತ್ರ ಉತ್ಸವವನ್ನು ತಿ ತಿ ದೇ ಗಳ ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವತಿಯಿಂದ ತಮಿಳುನಾಡು ಆಂಧ್ರಪ್ರದೇಶ, ಕರ್ನಾಟಕಗಳಲ್ಲಿ ಆಚಾರ್ಯರಿಗೆ ಹತ್ತಿರದ ಸಂಬಂಧವಿದ್ದ ಊರುಗಳಲ್ಲಿ ಏಪ್ರಿಲ್ 27 ರಿಂದ ಮೇ ಆರರ ವರೆಗೆ ಉತ್ಸಾಹ ಸಂಭ್ರಮಗಳಿಂದ ಆಚರಿಸಲಾಯಿತು

ತಿರುಪತಿಯ ಶ್ರೀ ಅನ್ನಮಾಚಾರ್ಯ ಕಲಾಮಂದಿರದಲ್ಲಿ 27 4 92 ರಂದು ಸಭೆ ನಡೆಯಿತು ಇದರಲ್ಲಿ ಶ್ರೀ ಟಿ ಎಸ್ ನರಸಿಂಹಾಚಾರ್ಯರು ತಿರುಮಲೈ ಅನಂತಾಳ್ವಾನ್ ಬಗ್ಗೆಯೂ, ಡಾ|| ವರದರಾಜನ್ ರಾಮಾನುಜರು ಹಾಗೂ ಅನಂತಾಳ್ವನ್‌ರ ಬಗ್ಗೆಯೂ ಮಾತನಾಡಿದರು 28 ರಂದು ಶ್ರೀ ಶೇಷಾದ್ರಿ ಅಯ್ಯಂಗಾರ್ಯರು ರಾಮಾನುಜರು ತಿರುವೆಂಗಡದೊಡನೆ ಹೊಂದಿದ್ದ ಸಂಬಂಧವನ್ನು ವಿವರಿಸಿದರು ಶ್ರೀವರದ ರಾಮಾನುಜಾಚಾರ್ಯರು ರಾಮಾನುಜ ನೂತ್ರಂದಾದಿಯ ವಶಿಷ್ಟವನ್ನು ವಿವರಿಸಿದರು

30 ಏಪ್ರಿಲ್ 1992 ಹಾಗೂ ಮೇ 1, 1992 ರಂದು ಆಂಧ್ರಪ್ರದೇಶದ ಪಶ್ಚಿಮಗೋದಾವರೀ ಜಿಲ್ಲೆಯ ನರಸಾಪುರದಲ್ಲಿ ಕಾರ್ಯಕ್ರಮ ನಡೆಯಿತು ಸರ್ವಶ್ರೀ ಕೆ ವೆಂಕಟಾಚಾರ್ಯ, ಇ ರಾಮಾನುಜಾಚಾರ್ಯ, ಪರಾಶರ ಸುದರ್ಶನಬಟ್ಟರ್ ಅವರುಗಳು ಮಾತನಾಡಿದರು

2 5 92 ರಂದು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಶ್ರೀ ರಾಮಾನುಜರ ಹಾಗೂ ಶ್ರೀ ಅನಂತಾಳ್ವಾನ್‌ರ ಚಿತ್ರಪಟ ತೈಲವರ್ಣ ಚಿತ್ರಪಟಗಳ ಅನಾವರಣವಾಯಿತು ಕೇಂದ್ರೀಯ ಸಂಸ್ಕೃತ ವಿಶ್ವವಿದ್ಯಾಲಯದ ಉಪಕುಲಪತಿ ಶ್ರೀ ಎನ್ ಎಸ್ ಆರ್ ತಾತಾಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತದ ಬಗ್ಗೆ ಮಾತನಾಡಿದರು ತಿರುಮಲೆಯಲ್ಲಿ ಸ್ವಾಮಿಸೇವೆಯಲ್ಲಿ ಜೀವನವನ್ನು ಮುಡಿಪಾಗಿಟ್ಟ ಶ್ರೀ ಅನಂತಾಳ್ವಾನ್ ವಂಶಸ್ಥರನ್ನು ಚಿತ್ರಪಟ ಕಲಾವಿದ ಶ್ರೀ ಜಗದೀಶ್ ಅವರನ್ನೂ ಸನ್ಮಾನಿಸಲಾಯಿತು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ಭಕ್ತಿ ತತ್ವವನ್ನು ಕುರಿತು ಮಾತನಾಡಿದರು ಶ್ರೀ ಟಿ ಎ ಗೋಪಾಲಾಚಾರ್ಯರು ರಾಮಾನುಜ ಚತುಶ್ಲೋಕಿಯನ್ನು ಗಾಯನ ಮಾಡಿದರು

ತಮಿಳುನಾಡಿನ ಶ್ರೀ ಪೆರಂಬುದೂರಿನ ಜೀಯರ್ ಮಠದಲ್ಲಿ ಶ್ರೀ ಶ್ರೀ ಯತಿರಾಜಸ್ವಾಮಿಗಳ ಅಧ್ಯಕ್ಷತೆಯಲ್ಲಿ 3 5 92 ರಂದು ಉತ್ಸವ ಕಾರ್ಯಕ್ರಮ ನಡೆಯಿತು ಕಡಿಯೂರು ರಾಮ ಅಯ್ಯಂಗಾರ್ಯರು ಎಂಬೆರುಮಾನಾರ್ ವೈಭವವನ್ನು ಕುರಿತು ಮಾತನಾಡಿದರು ಶ್ರಿ ಆರ್, ಕಣ್ಣನ್ ಅವರು ಗೋದಾದೇವಿ ಹಾಗೂ ರಾಮಾನುಜರನ್ನು ಕುರಿತು ವಿವರಿಸಿದರು ಧರ್ಮಪ್ರಚಾರ ಪರಿಷತ್‌ನ ಕಾರ್ಯದರ್ಶಿ ಡಾ|| ಅಪ್ಪಜೋಡು ವೆಂಕಟಸುಬ್ಬಯ್ಯ ಅವರು ರಾಮಾನುಜರ ಅವತಾರ ಮಹತ್ವವನ್ನು ವಿವರಿಸಿದರು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ಯೋಜನೆಯುಗಳ ವಿವರಗಳನ್ನು ನೀಡಿದರು

ಕರ್ನಾಟಕದ ಮೇಲುಕೋಟೆಯಲ್ಲಿನ ಶ್ರೀ ವಿವೇಕೋಪ್ಲಾಸಿನಿ ಸಭೆಯಲ್ಲಿ ಮೇ 5, 6, ರಂದು ಉತ್ಸವಕಾರ್ಯಕ್ರಮಗಳು ಏರ್ಪಾಡಾಗಿದ್ದವು, ಖ್ಯಾತ ವಿದ್ವಾಂಸ ಶ್ರೀ ಎಂ ಎ ಲಕ್ಷ್ಮೀತಾತಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ ಸಭೆಗಳಲ್ಲಿ ಶ್ರೀ ಇ ಎಸ್ ಪೂವ

## ಡಾ|| ಕರುಣಶ್ರೀ ನಿಧನ



ಆಂಧ್ರ ಸಾರಸ್ವತ ಲೋಕದಲ್ಲಿ 20 ನೇ ಶತಕದ ಮಹಾಕವಿಯೆಂದೂ, ಜನಕವಿಯೆಂದೂ ಹೆಸರಾದ ಡಾ|| ಜಂಧ್ಯಾಲ ಪಾಪಯ್ಯ ಶಾಸ್ತ್ರಿಯವರು (80) ಜೂನ್ 21 ರಂದು ಭಾನುವಾರ ರಾತ್ರಿ 12 ಗಂಟೆಯ ಹೊತ್ತಿನಲ್ಲಿ ಗುಂಟೂರಿನ ತಮ್ಮ ಸ್ವಗೃಹದಲ್ಲಿ ಹೃದಯಾಘಾತದಿಂದ ಮೃತರಾದರೆಂದು ತಿಳಿಸಲು ವಿಷಾದವಾಗುತ್ತದೆ

ಗುಂಟೂರು ಜಿಲ್ಲೆಯ ಪೆದನಂದಿಪಾಡು ಬಳಿಯ ಕುಪ್ಪರ್ರು ಗ್ರಾಮದಲ್ಲಿ 1912 ರ ಆಗಸ್ಟ್ 4 ರಂದು ಮಹಾಲಕ್ಷ್ಮಿ ಪರದೇಶಯ್ಯ ದಂಪತಿಗಳಲ್ಲಿ ಜನಿಸಿದ ಶ್ರೀ ಯುತರು ಆರಂಭದಲ್ಲಿ ಪ್ರೌಢಶಾಲಾ ತೆಲುಗು ಪಂಡಿತರಾಗಿಯೂ, ನಂತರ ಗುಂಟೂರಿನ ಆಂಧ್ರ ಕ್ರಿಶ್ಚಿಯನ್ ಕಾಲೇಜಿನಲ್ಲೂ ಅಧ್ಯಾಪಕರಾಗಿ ಸೇವೆಸಲ್ಲಿಸಿದರು ಅವರ ಉದಯಶ್ರೀ ಕರುಣಶ್ರೀ, ವಿಜಯಶ್ರಿ , ಮೊದಲಾದ ಪುಸ್ತಕಗಳು ಅಪಾರ ಜನಮನ್ನಣೆಯನ್ನು ಗಳಿಸಿದವು, ತೆಲುಗು ಸಾಹಿತ್ಯದ ವಿವಿದ ಪ್ರಾಕಾರಗಳಲ್ಲಿ ಸುಮಾರು ಎಪ್ಪತ್ತಕೂ ಹೆಚ್ಚಿನ ಕೃತಿಗಳನ್ನು ರಚಿಸಿದ ಶ್ರಿ ಯುತರು ಪುಷ್ಪ ವಿಲಾಪದ ಕವಿಯೆಂದೆ ಪ್ರಸಿದ್ಧರಾಗಿದರು ಕರುಣ ರಸದ ಅದ್ವಿತಿಯ ಅಭಿವಕ್ತಿ ಯಿಂದಾಗಿ ಕರುಣಶ್ರಿ ಎಂದ ಕರೆಯಲ್ಪಡುತ್ತಿದ್ದರು ಅವರ ಉದಯಶ್ರಿ ಐವತ್ತಕ್ಕೂ ಹೆಚ್ಚು ಮುದ್ರಣಗಳನ್ನು ಕಂಡ ಕೃತಿಯಾಗಿ ಅವರ ಜನಪ್ರಿಯತೆಗೆ ಸಾಕ್ಷಿಯಾಗಿದೆ

ಶ್ರೀಯುತರನ್ನು ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯ ಡಾಕ್ಟರೇಟ್ ಕೊಟ್ಟು ಗೌರವಿಸಿದರೆ, ತೆಲುಗು ವಿಶ್ವವಿದ್ಯಾನಿಲಯ, ಸಾಹಿತ್ಯ ಅಕಾಡಮಿಗಳೂ ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ

ಶ್ರೀಯುತರು ಪೋತನ ಭಾಗವತದ ಆಧುನಿಕ ತೆಲುಗು ಅನುವಾದ ಮಾಲೆಯ ಸಂಪಾದಕರಾಗಿ ತಿ ತಿ ದೇ ಪುಸ್ತಕ ಪ್ರಕಟಣ ವಿಭಾಗದಲ್ಲಿ ಕೆಲಸ ನಿರ್ವಹಿಸಿ ಕೀರ್ತಿವಂತರಾಗಿದ್ದಾರೆ

ಶ್ರೀಯುತರು ಇಬ್ಬರು ಪುತ್ರರನ್ನೂ ಒಬ್ಬ ಪುತ್ರಿಯನ್ನೂ ಅಪಾರ ಕಾವ್ಯಾಭಿಮಾನಿಗಳನ್ನೂ ಬಿಟ್ಟು ಹೊರಟಿರುವ ಈ ಸಂದರ್ಭದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರಿ ಎಂ ವಿ ಎಸ್ ಪ್ರಸಾದ್ ರವರು ತೀವ್ರ ಸಂತಾಪವನ್ನು ವ್ಯಕ್ತಪಡಿಸಿದ್ದಾರೆ ತಿ ತಿ ದೇ ಪೌರಸಂಬಂಧಾಧಿಕಾರಿ ಡಾ|| ರಾವುಲ ಸೂರ್ಯನಾರಾಯಣಮೂರ್ತಿ ಅವರೂ ಸಂತಾಪ ವ್ಯಕ್ತಪಡಿಸಿದ್ದಾರೆ

## ತಿರುಮಲೆ ತಿರುವತಿ ದೇವಸ್ಥಾನಗಳು,

ತಿರುವತಿ

### ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಎಂ ವಿ ಎಸ್ ಪ್ರಸಾದ್ ಐ ಎ ಎಸ್
ಕಾರ್ಯನಿರ್ವಹಣಾಧಿಕಾರಿ

ಪ್ರಿಯ ಭಕ್ತ ಬಂಧುಗಳೆ

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ ವೇದಕಾಲ ದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ ಆಹಾರವನ್ನು ನೀಡಿವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುವತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ ಭಾರತಾ ದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ ಉತ್ಕೃಷ್ಟತೆಯೂ ಸಾರ್ವಜನಿಕರ ಶ್ಲಾಘನೆಗೆ ಪಾತ್ರ ವಾಗಿದೆ ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನಯೋಜನೆಯಲ್ಲಿ ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಧಾಶಕ್ತಿ ವಂತಿ ಗೆಯನ್ನು ಸಲ್ಲಿಸುವುದರ ಮೂಲಕ ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ ತಿ ದೇವಸ್ಥಾನಗಳು ಈಚೆಗೆ ನಿರ್ಧರಿ ಸಿದೆ ತಾವು ರೂ ೧೦೦೦೦ ಅಧವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ವರಂ ಪರೆಯಾದ ಅನ್ನದಾನಯೋಜನೆಯನ್ನು ತಿ ತಿ ದೇ ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ ಪರಿಷ್ಕೃತವಾದ ನಿತ್ಯ ಅನದಾನಯೋಜನೆಯಲ್ಲಿ ಸೇರಿ ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ ಅನ್ನದಾನ ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡ ಬೇಕು

ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ
**(ಎಂ ವಿ ಎಸ್ ಪ್ರಸಾದ್)**

ರಾಘವಾಚಾರ್ಯ, ಶ್ರೀ ನರಸಿಂಹಾಚಾರ್ಯ ಅವರುಗಳು ಮಾತನಾಡಿದರು ಆರ್ಯ ಅವರು ಅನುವದಿಸಿದ ಕನ್ನಡದ 'ಅಮಲನಾದಿಪ್ಪಿರಾನ್' ಕೃತಿಯನ್ನು ತಿ ತಿ ದೇ ಪೌರಸಂಬಂದಾದಿಕಾರಿ ಡಾ|| ರಾವುಲ ಸೂರ್ಯನಾರಾಯಣಮೂರ್ತಿ ಅವರು ಬಿಡುಗಡೆ ಮಾಡಿದರು

### ತಿರುವತಿಯಲ್ಲಿ ಮೆಟ್ಲ ಉತ್ಸವ

ತಮಿಳು ಪಂಚಾಂಗದ ಯುಗಾದಿಯಂದು (14 4 92) ತಿರುಪತಿಯಲ್ಲಿ ತಿರುಮಲೆಯ ಮೆಟ್ಲ ಉತ್ಸವ ಘನವಾಗಿ ನಡೆದು ಯಶಸ್ವಿಯಾಯಿತು

23 ನೇ ವರ್ಷದಲ್ಲಿ ಕಾಲಿಟ್ಟ ಈ ಪಡಿ ಉತ್ಸವ ತಿರುಪತಿಯ ಅಲಿಪಿರಿಯಿಂದ ತಿರುಮಲೆಗೆ ಮೆಟ್ಟಿಲ ಪೂಜೆ ಮಾಡುತ್ತ ಭಜನೆ ಹಾಡು ಕೀರ್ತನೆಗಳ ನಡುವೆ ಸಂಭ್ರಮದಿಂದ ಸಾಮೂಹಿಕವಾಗಿ ಸಾಗುವುದು

ಪಡಿ ಉತ್ಸವದ ಹಿಂದಿನ ದಿನ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಸತ್ರದಿಂದ ಕರ್ನಾಟಕ, ತಮಿಳುನಾಡು, ಆಂಧ್ರಗಳಿಗೆ ಸೇರಿದ 150 ಕ್ಕೂ ಹೆಚ್ಚಿನ ಭಜನೆಸಂಘಗಳು ತಿರುಚಾನೂರಿಗೆ ಮೆರವಣಿಗೆಯಲ್ಲಿ ಸಾಗಿ ಶ್ರೀ ಪದ್ಮಾವತೀ ಅಮ್ಮನವರ ದರ್ಶನಪಡೆದು ಶ್ರೀ ಗೋವಿಂದರಾಜಸ್ವಾಮಿ ದೇವಾಲಯಕ್ಕೆ ಹಿಂದಿರುಗಿ ಆರಾಧನೆ ನಡೆಸಿದವು

14 4 92 ರಂದು ಬೆಳಗ್ಗೆ 5 ಗಂಟೆಗೆ ಅಲಿಪಿರಿಯಲ್ಲಿ ಸಾವಿರಾರು ಮಂದಿ ನೆರೆದು ಗೋವಿಂದ ನಾಮಘೋಷ ಗಗನವನ್ನು ಮುಟ್ಟುತ್ತಿರುವಂತೆ ಆರಂಭವಾದ ಉತ್ಸವದ ಆರಂಭ ಸಭೆಯಲ್ಲಿ ಡಾ|| ಆರ್ ಸೂರ್ಯನಾರಾಯಣ ಮೂರ್ತಿ, ಡಾ|| ಎ ವೆಂಕಟಸುಬ್ಬಯ್ಯ ಡಾ|| ಶೌರಿರಾಜನ್, ಡಾ|| ವರದರಾಜನ್ ಅವರು ಮಾತನಾಡಿದರು ಶ್ರೀ ನರಸಿಂಹ (ಮೆಟ್ಲ ಉತ್ಸವದ ಕಾರ್ಯದರ್ಶಿ) ಅಧ್ಯಕ್ಷತೆಯಲ್ಲಿ ತಿರುಮಲೆಯ ಶ್ರೀ ಶ್ರೀ ಅನಂತನಾರಾಯಣ ಶ್ರೀಪಾದಂಗಳು ಉತ್ಸವವನ್ನು ಆರಂಭಿಸಿದರು

ಭಜನೆ ಕೀರ್ತನೆಗಳ ಸಮೂಹಗಾಯನದ ನಡುವೆ ತಿರುಮಲೆಯನ್ನು ಸೇರಿದ ಉತ್ಸವ ರಥ ಬೀದಿಗಳಲ್ಲಿ ಪ್ರದಕ್ಷಿಣೆ ಬಂದು ಸ್ವಾಮಿದರ್ಶನ ಪಡೆಯಿತು ಕಳ್ಳಕ್ಕುರುಚ್ಚಿಯ ಮೇಲ್ ವೆಂಕಟಾಪುರದಿಂದ ಈ ಪಡಿ ಉತ್ಸವಕ್ಕಾಗಿ ಪಾದಯಾತ್ರೆಯಲ್ಲಿ ಜನ ಆಗಮಿಸಿದ್ದರು ಅಂದು ಸಂಜೆ ತಿರುಮಲೆಯ ಆಸ್ಥಾನಸದಸ್ ಸಭಾಂಗಣದಲ್ಲಿ ಭಕ್ತಿ ಕಾರ್ಯಕ್ರಮ ನಡೆಯಿತು

## 1992 --- 93 ಸಾಲಿನ ಆಯವ್ಯಯದ ಆಮೋದ

1992 93 ಸಾಲಿನ ಅಂದಾಜು ಆಯವ್ಯಯ ವನ್ನು ಪರಿಶೀಲಿಸಿದ ತಿ ತಿ ದೇ ಧರ್ಮಕರ್ತರ ಮಂಡಳಿ ಅದನ್ನು ಆಮೋದಿಸಿವೆ ಇದರಂತೆ ಈ ಸಾಲಿನಲ್ಲಿ ಆದಾಯ 118 76 ಕೋಟಿ ರೂಪಾಯಿ ಗಳಿಂದು ಅಂದಾಜು ಮಾಡಲಾಗಿದೆ ಈ ಆದಾಯ ದಲ್ಲಿ ಹುಂಡಿಯ ಮೂಲಕವಾಗಿ 40 22 ಕೋಟಿ, ಲಾಡು ವಿಕ್ರಯದಿಂದ 11 55 ಕೋಟಿ ರೂಪಾ ಯಿಗಳೂ 25 ರೂಪಾಯಿಗಳ ವಿಶೇಷ ಪ್ರವೇಶದ ಟಿಕೆಟ್ ಮಾರಾಟದಿಂದ 7 85 ಕೋಟಿ ರೂ ಗಳೂ ಸೇರಿವೆ ಆಯವ್ಯಯದ ವಿವರಗಳನ್ನು ನೀಡಿದ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಟಿ ಸುಬ್ಬ ರಾಮಿರೆಡ್ಡಿ ಅವರು ಆರ್ಜಿತ ಸೇವೆಗಳ ಮೂಲಕ 9 37 ಕೋಟಿ ರೂಗಳ ಆದಾಯವಾಗುವುದೆಂದೂ ತಿಳಿಸಿದರು

ವೆಚ್ಚಗಳ ವಿಭಾಗದಲ್ಲಿ ಆಸ್ತಿ ಪ್ರಾಂತಗಳಿಗಾಗಿ 27 43 ಕೋಟಿ ರೂಗಳೂ, 15 80 ಕೋಟಿ ರೂಗಳು ಪ್ರಸಾದಗಳ ತಯಾರಿಕೆಗಾಗಿಯೂ ಮೀಸ ಲಾಗಿದೆಯೆಂದು ಅವರು ತಿಳಿಸಿದರು

ಇದೇ ಸಮಯದಲ್ಲಿ 1991 92 ಸಾಲಿನ ಪುನ ರ್ಪರಿಶೀಲಿತ ಆಯವ್ಯಯ ಪಟ್ಟಿಯನ್ನು 119 54 ಕೋಟಿ ರೂಗಳದ್ದು ಆಮೋದಿಸಲಾಯಿತು

ಚಿತ್ತೂರು ಜಿಲ್ಲೆಯ ಪಾಕಾಲ, ಮೊಲಕಲಚೆರು ವುಗಳಲ್ಲೂ ಪಶ್ಚಿಮ ಗೋದಾವರೀ ಜಿಲ್ಲೆಯ ಪಾಲ ಕೊಲ್ಲು ವಿಶಾಖಪಟ್ಟಂ ಜಿಲ್ಲೆಯ ಚೋಡವರಂಗ ಳಲ್ಲೂ ತಿ ತಿ ದೇ ಕಲ್ಯಾಣ ಮಂಟಪಗಳನ್ನು ನಿರ್ಮಿ ಸಲು ತೀರ್ಮಾನಿಸಲಾಯಿತು

ತಿರುಪತಿಯ ಶ್ರೀ ಪದ್ಮಾವತೀ ಮಹಿಳಾಕಾ ಲೇಜನ್ನು ಎರಡು ವಿಭಾಗಮಾಡಿ ಶ್ರೀ ಪದ್ಮಾ ವತೀ ಮಹಿಳಾಸ್ನಾತಕ ಕಲಾಶಾಲೆ ಹಾಗೂ ಸ್ನಾತಕ ಪೂರ್ವ ಶಾಲೆಗಳನ್ನಾಗಿಸಲು ತೀರ್ಮಾನಿಸಲಾಗಿದೆ ಯೆಂದು ಅವರು ತಿಳಿಸಿದರು

ಶ್ರೀ ಗೋವಿಂದರಾಜಸ್ವಾಮಿ ಕಲಾಶಾಲೆಯಲ್ಲಿ ಸ್ನಾತಕೋತ್ತರ ವಿಭಾಗಗಳನ್ನು ( ಎಂ ಎಸ್ ಸಿ, ಕಂಪ್ಯೂಟರ್ ವಿಜ್ಞಾನ, ಎಂ ಎಸ್ ಸಿ ಮೈಕ್ರೋಬ ಯಾಲಜಿ, ಎಂ ಬಿ ಎ ) ಆರಂಭಿಸಲು ಅನುಮತಿ ನೀಡಬೇಕೆಂದು ಎಸ್ ವಿ ವಿಶ್ವವಿದ್ಯಾಲಯಕ್ಕೆ ಅಭ್ಯ ರ್ಥನೆ ಸಲ್ಲಿಸುವುದಾಗಿಯೂ ಅವರು ತಿಳಿಸಿದರು

## ತಿರುಮಲೆಯಲ್ಲಿ ಮಾರಿಷಸ್ ರಾಷ್ಟ್ರಪತಿ

ಮಾರಿಷಸ್ ರಾಷ್ಟ್ರಾಧ್ಯಕ್ಷ ಶ್ರೀ ವೀರಾಸ್ವಾಮಿ ರಿಂಗಾಡು ಅವರು ತಮ್ಮ ಭಾರತದ ಅಧಿಕೃತ ಪ್ರವಾ ಸದಲ್ಲಿ ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು

ತಿರುಮಲೆಯ ಆಲಯದ ಬಳಿ ಅವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ತಿ ತಿ ದೇ ಅಧ್ಯಕ್ಷ ಶ್ರೀ ಟಿ ಸುಬ್ಬುರಾಮಿ ರೆಡ್ಡಿ, ಜೆ ಇ ಓ ಶ್ರೀ ಜನಾರ್ದನ ನಾಯುಡು, ಸಂರ ಕ್ಷಣಾಧಿಕಾರಿ ಶ್ರೀ ವೈ ಎಸ್ ಎನ್ ಶರ್ಮ ಮೊದಲಾ ದವರು ಸ್ವಾಗತಿಸಿದರು ಸ್ವಾಮಿಯನ್ನು ಸಂದರ್ಶಿ ಸಿದ ನಂತರ ಅವರಿಗೆ ಸ್ವಾಮಿಪ್ರಸಾದವನ್ನು ನೀಡ ಲಾಯಿತು

## ಹುಂಡಿಯಲ್ಲಿ ಬಂಗಾರದ ಗಟ್ಟಿ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾ ಲಯದ ಹುಂಡಿಯಲ್ಲಿ ಒಂದು ಕಿಲೋಗ್ರಾಂ ತೂಕದ ಬಂಗಾರದ ಗಟ್ಟಿಯನ್ನು ಭಕ್ತರೊಬ್ಬರು ಕಾಣಿಕೆಯಾಗಿ ಸಲ್ಲಿಸಿದ್ದಾರೆ

ಹುಂಡಿಯಲ್ಲಿ ಅಂದಾಜು 4 ಲಕ್ಷ ರೂಪಾಯಿ ಗಳ ಬೆಲೆಬಾಳುವ ಈ ರೀತಿಯ ಕಾಣಿಕೆಯನ್ನು ಸಮರ್ಪಿಸಿರುವುದು ಇದೆ ಮೊದಲಬಾರಿ ಎಂದು ಅಧಿಕಾರಿಗಳು ತಿಳಿಸಿದ್ದಾರೆ (ಈ ಹಿಂದೆ 15 ಕಿಲೋಗ್ರಾಂತೂಕದ ಬಂಗಾರದ ಸಮರ್ಪಣ ಆಗಿ ದ್ದರೂ ಅದು ಆಭರಣ ರೂಪದಲ್ಲಿದ್ದಿತು)

****

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಆಗಸ್ಟ್ 1992

**ಗಾಯತ್ರೀ**
ಡಿ ರಾಮಕೃಷ್ಣರಾವ್

**ಮಾಯಿ**
ಮತ್ತೀಗೆರೆ ಅನಂತು

**ರಾದಿಕಾ ಆರಾದಿಕಾ**
ಕಂದಾಡೆ ಕೇಶವನ್

**ವೃಷಭ ಜವಮಹಿಮೆ**
ಪದ್ಮುಮ್ನ

**ಮಹಾ ಮಾತೆ ರಾಣೂಬಾಯಿ**
ರಘುಸುತ

ಜೊತೆಗೇ ಮತ್ತೂ ಹಲವಾರು ಸಾಂದರ್ಭಿಕ, ಸಾಮಯಿಕ, ತರ್ಕರ್ಪಕ, ಲೇಖನಗಳೊಡನೆ ಬಿಡುಗಡೆಯಾಗಲಿವೆ ತಮ್ಮ ಪ್ರತಿಯನ್ನು ಇಂದೇ ಕಾಯಿರಿಸಿ ಬಿಡಿಪ್ರತಿಯ ಬೆಲೆ ರೂ 1/ ಮಾತ್ರ. ವಾರ್ಷಿಕ ಚಂದಾ ರೂ 1/ ಮಾತ್ರ ವಾರ್ಷಿಕ ಚಂದಾ ಹಣವನ್ನು ಸಂಪಾದಕರು ಸಪ್ತಗಿರಿ ತಿ ತಿ ದೇ ತಿರುಪತಿ ಇವರಿಗೆ ಎಂ ಓ ಅಥವಾ ಪೋಸ್ಟಲ್ ಆರ್ಡರ್ ಮೂಲಕ ಕಳುಹಿಸಿ

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ --- 1992

| | | |
|---|---|---|
| 1 | ಶನಿವಾರ | ಆಂಡಾಳ್ ತಿರುವಾಡಿ ಪ್ಪೂರ, ಶಾತ್ತುಮೊರೆ |
| 2 | ಬಾನುವಾರ | ನಾಗಚತುರ್ದಿ |
| 3 | ಸೋಮವಾರ | ಗರುಡ ಪಂಚಮಿ |
| 7 | ಶುಕ್ರವಾರ | ವರಲಕ್ಷ್ಮೀವ್ರತ<br>ತಿರುಮಲೆಯಲ್ಲಿ ಪವಿತ್ರೋತ್ಸವಾರಂಬ |
| 10 | ಸೋಮವಾರ | ತಿರುಮಲೆಯಲ್ಲಿ ಪವಿತ್ರೋತ್ಸವ ಸಮಾಪ್ತಿ |
| 11 | ಮಂಗಳವಾರ | ಯಾಮುನಾಚಾರ್ಯರ ವರ್ಷ ತಿರುನಕ್ಷತ್ರ. |
| 12 | ಬುದವಾರ | ಋಗ್ವೇದ ಉಪಾಕರ್ಮ, ವರಾಹ ಜಯಂತಿ |
| 13 | ಗುರುವಾರ | ಹಯಗ್ರೀವ ಜಯಂತಿ |
| 15 | ಶನಿವಾರ | ಸ್ವಾತಂತ್ರ್ಯ ದಿನ |
| 21 | ಶುಕ್ರವಾರ | ಗೋಕುಲಾಷ್ಟಮಿ |
| 30 | ಬಾನುವಾರ | ಶ್ರೀ ವರಾಹ ಜಯಂತಿ |
| 31 | ಸೋಮವಾರ | ವಿನಾಯಕ ಚೌತಿ |

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ ಕೀರ್ತನೆ ಭಾವ ಛಾಯಾ ಚಿತ್ರಗಳನ್ನು ಕಳುಹಿಸ ಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಪುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು ತಮಿಳು ಹಿಂದಿ ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ ವಿವರಗಳಿಗೆ

ಸಂಪಾದಕರು
ಸಪ್ತಗಿರಿ
ತಿ ತಿ ದೇವಸ್ಥಾನ ತಿರುಪತಿ ೫೧೭೫೦೭
ಚಿತ್ತೂರು ಜಿಲ್ಲೆ ಆಂ ಪ್ರ

Edited and published on behalf of T T Devasthanams by K. Subba Rao M A and Printed at T T D Press
by M Vijayakumar Reddy Manager T T D Press Tirupati 517 507